(ತೋಟಗಾರಿಕೆ) ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ, ಆದರೆ ಅವರು ವೈಜ್ಞಾನಿಕ ರೀತಿಯಲ್ಲಿ ಸದರ್ ವರದ ತುಂಡನ್ನು ಪರೀಕ್ಷಿಸಿರುವುದಿಲ್ಲ, ಮತ್ತು ಅದು ಬಾಹ್ಯ ನೋಟಕ್ಕೆ ಗಂಧದ ಮರದ ಕೊಂಬೆಯ ರೀತಿಯಲ್ಲಿ ಕಾಣುತ್ತದೆ ಎಂಬ ಅಭಿಪ್ರಾಯ ಪಟ್ಟಿರುತ್ತಾರೆ. ಆದರೆ ನಿಶಾನೆ P-12 ರೀತ್ಯಾ Institute of Wood Science & Techonology (Indian Council of Forestry Research and Education) Malleswaram, Bangalore-3, ಇದರ ವಿಜ್ಞಾನಿಗಳು ಸದರ್ ಮಾದರಿ ಗಂಧದ ತುಂಡು ಗಂಧದ ಮರವಾಗಿರುವುದಿಲ್ಲವೆಂದು ವೈಜ್ಞಾನಿಕವಾಗಿ ಪರೀಕ್ಷಿಸಿ ಖಚಿತ ಅಭಿಪ್ರಾಯ ನೀಡಿರುತ್ತಾರೆ. ಆದ್ದರಿಂದ ನಿಶಾನೆ P-12 ಅಡಿಯಲ್ಲಿ Institute of Wood Science & Technology ಇದರ ವಿಜ್ಞಾನಿಯವರು ನೀಡಿದ ಖಚಿತ ಅಭಿಪ್ರಾಯವನ್ನು ಒಪ್ಪಿಕೊಳ್ಳುವುದು ಸೂಕ್ತವಾಗಿರುತ್ತದೆ.

11. ಈ ಮೇಲ್ಕಂಡ ಕಾರಣಗಳಿಗಾಗಿ ಈ ಪ್ರಕರಣದಲ್ಲಿ ಫಿರ್ಯಾದಿಯು ದಿನಾಂಕ: 27.01.2004 ರಮದು ವಶಪಡಿಸಿಕೊಂಡ ಆನೆಯ ದಂತಗಳಂತಿರುವ ವಸ್ತುಗಳು ಆನೆಯ ದಂತಗಳಾಗಿರುವುದಿಲ್ಲ ಮತ್ತು ಮರದ ತುಂಡುಗಳು ಗಂಧದ ತುಂಡುಗಳಾಗಿರುವುದಿಲ್ಲ ಎಂದು ಕಂಡು ಬರುತ್ತದೆ. ಆದರೆ ಆರೋಪಿತರು ಸದರ್ ಆನೆ ದಂತಗಳಂತಿರುವ ವಸ್ತುಗಳನ್ನು ಮತ್ತು ಗಂಧದ ತುಂಡುಗಳಂತಿರುವ ಮರದ ತುಂಡುಗಳನ್ನು ದುರುಪಯೋಗ ಪಡಿಸಿಕೊಳ್ಳುವ ಸಾಧ್ಯತೆಗಳಿವೆ. ಆದ್ದರಿಂದ ಫಿರ್ಯಾದಿಯು ಅಮಾನತ್ತು ಪಡಿಸಿಕೊಂಡ ಸದರ್ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸಾಧ್ಯವಾಗಲಾರದು. ಆದರೆ ವಾಹನದಲ್ಲಿ ದೊರೆತ ಸದರಿ ಆನೆ ದಂತದಂತೆ ಇರುವ ವಸ್ತುಗಳನ್ನು ಮತ್ತು ಮರದ ತುಂಡುಗಳನ್ನು ಅವುಗಳ ದುರುಪಯೋಗ ತಡೆಗಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಆದ್ದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

a) ಈ ಪ್ರಾಧಿಕಾರವು ದಿನಾಂಕ: 04.12.2004 ರಂದು ವಾಹನ ಸಂಖ್ಯೆ KA-03-A-7738 ಆಟೋ ರಿಕ್ಷಾವನ್ನು ಅದರ ಮಾಲೀಕರಾದ ಅರ್ಜಿದಾರ್ ನಿಯಾಜ್ ಖಾನ್ ಬಿನ್ ಅಖಿಲ್ ಖಾನ್ ಇವರು ಮಧ್ಯಂತರ ಸುಪರ್ದಿಗೆ ಬಿಡುಗಡೆ ಮಾಡಿದ್ದು, ಸದರ್ ಮಧ್ಯಂತರ ಬಿಡುಗಡೆಯನ್ನು ಖಾಯಂ ಬಿಡುಗಡೆಯಾಗಿ ಪರಿವರ್ತಿಸಿದೆ.

b) ದಿನಾಂಕ: 04.12.2004 ರಂದು ಮಾಡಿದ ಮಧ್ಯಂತರ ಆದೇಶದ ರೀತ್ಯ ಅರ್ಜಿದಾರರು, ಅರ್ಜಿದಾರ ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಇವರ ಜಂಟಿ ಹೆಸರಿನಲ್ಲಿ ದಿನಾಂಕ: 11.12.2004 ರಂದು ಇಂಡಿಯನ್ ಬ್ಯಾಂಕ್, ಬೆಂಗಳೂರು 1 ಇವರಲ್ಲಿಯ ರೂಪಾಯಿಗಳು 30,000-00 (ರೂಪಾಯಿಗಳು ಮೂವತ್ತು ಸಾವಿರ) ಮೌಲ್ಯದ ಕ್ಯಾಶ್ ಸರ್ಟಿಫಿಕೇಟ್ ನಂ. 517672 ಇದನ್ನು ಅರ್ಜಿದಾರರ ಸುಪರ್ದಿಗೆ ಬಿಡುಗಡೆ ಮಾಡಿದೆ.

c) ಸದರ ವಾಹನದಲ್ಲಿ ವಶಪಡಿಸಿಕೊಂಡ ಆನೆಯ ದಂತದಂತಿರುವ ವಸ್ತುಗಳನ್ನು ಹಾಗೂ ಗಂಧದಂತಿರುವ ಮರದ 20 ತುಂಡುಗಳನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

d) ಈ ಮೇಲ್ಕಂಡ ಆದೇಶವು ಅಪೀಲು ಅವದಿಯ ನಂತರ ಜಾರಿ ಬರತಕ್ಕದ್ದು.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟಿದ್ದು ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ: 05.04.2006 ರಂದು ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

**ಬಿ.ಎಂ. ಪರಮೇಶ್ವರ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಬೆಂಗಳೂರು ನಗರ ವಿಭಾಗ, ಬೆಂಗಳೂರು.

**ನಿಶಾನೆಗಳೊಳಪಟ್ಟಿರುವ ದಾಖಲಾತಿಗಳು :**

| ನಿಶಾನೆ ಸಂಖ್ಯೆ | ದಿನಾಂಕ: | ವಿವರ |
|---|---|---|
| EXP-1 | 19.07.2005 | FIR ನಕಲು ಪ್ರತಿ |
| EXP-2 | 19.07.2005 | ಪೊಲೀಸ್ ಇನ್ಸ್‌ಪೆಕ್ಟರ್ ರವರ ಹೇಳಿಕೆಯ ನಕಲು ಪ್ರತಿ |
| EXP-3 | 19.07.2005 | ಮಹಜರ್ ನಕಲು ಪ್ರತಿ |
| EXP-4 | 19.07.2005 | ಪಿ.ಎಫ್. ನಕಲು ಪ್ರತಿ |
| EXP-5 | 19.07.2005 | ಆರೋಪಿ ಸ್ವ-ಇಚ್ಚಾ ಹೇಳಿಕೆ ನಕಲು ಪ್ರತಿ |
| EXP-6 | 19.07.2005 | ಆರೋಪಿ ಸ್ವ-ಇಚ್ಚಾ ಹೇಳಿಕೆ ನಕಲು ಪ್ರತಿ |
| EXP-7 | 19.07.2005 | ಸಾಕ್ಷಿದಾರರ ಹೇಳಿಕೆಯ ನಕಲು ಪ್ರತಿ |
| EXP-8 | 19.07.2005 | ಸಾಕ್ಷಿದಾರರ ಹೇಳಿಕೆಯ ನಕಲು ಪ್ರತಿ |
| EXP-9 | 05.04.2006 | ಪೊಲೀಸ್ ಇನ್ಸ್‌ಪೆಕ್ಟರ್ ರವರ ಅಸಲಿ ಮನವಿ ಪ್ರತಿ |
| EXP-10 | 05.04.2006 | ಕ.ಅ.ಕಾ. 1963 ಕಲಂ 71(B) ಅಡಿ ಕಾರಣ ಕೇಳುವ ನೋಟಿಸ್‌ನ ಕಚೇರಿ ಪ್ರತಿ |
| EXP-11 | 05.04.2006 | IAHVB, Southern Regional Disease Diagnostic Laboratory ರವರ ವರದಿಯ ನಕಲು ಪ್ರತಿ |
| EXP-12 | 05.04.2006 | Wood Properties & Uses Division ರವರ ವರದಿಯ ನಕಲು ಪ್ರತಿ |
| EXP-13 | 05.04.2006 | Indian Institute of Science ರವರ ವರದಿಯ ನಕಲು ಪ್ರತಿ |

ಇವರಿಗೆ :
ಶ್ರೀ ನಿಯಾಜ್ ಖಾನ್ (ವಾಹನದ ಮಾಲೀಕ)
ಬಿನ್ ಅಖೀಲ್ ಖಾನ್,
ನಂ. 3/1, ಟಿ. ನಂ. 1, 1ನೇ ಸ್ಟ್ರೀಟ್,
ಅರುಣಾಚಲಂ ಮೊದಲೀಯರ್ ರಸ್ತೆ,
ಬೆಂಗಳೂರು.

ಪಿ.ಆರ್. 771

## KARNATAKA ELECTRICITY REGULATORY COMMISSION, BANGALORE

### NOTIFICATION

### No: A/03/6/1146 Dtd.14th July 2006

In exercise of the powers conferred by sub-section 3 and sub-section 5 of Section 8 of the Karnataka Electricity Reforms Act, 1999 (Karnataka Act 25 of 1999), the Karnataka Electricity Regulatory Commission, with the approval of the State Government hereby make further amendments to the KERC (Recruitment and Conditions of Service) Regulations, 2000.

**1. Title and Commencement:-** (1) These Regulations may be called the Karnataka Electricity Regulatory Commission (Recruitment and Conditions of Service) (Amendment) Regulations, 2006.

(2) These Regulations shall come into force on the date of their publication in the Official Gazette.

**2. Amendment to first Schedule:-**

(1) In the first schedule to the Karnataka Electricity Regulatory Commission (Recruitment and Conditions of Service) Regulations, 2000, the figure '4' in column 3 at Sl. No. 24 shall be substituted by figure '8'.

By Order of the Commission

PD-83

**SHAIK AHMED**

SECRETARY

## UNIVERSITY OF AGRICULTURAL SCIENCES, DHARWAD

**Office of the Registrar, Yattinagudda Campus, Krishingar, Dharwad-580 005, Karnataka**

### NOTIFICATION

### No.R/B-114/2006, Dated: 13th July 2006

**Sub:** Amendment to C & R Regulations - by making provision to opt for change of cadre from Typist to Assistant.

**Ref:** 1) Resolution at Item No.37 of the proceedings of the 114th meeting of the Board of Regents, UAS, Dharwad, held on 08.06.2006.

2) Approval of the Vice-Chancellor, UAS, Dharwad.

In pursuance to the Resolution of the Board of Regents, UAS, Dharwad vide ref.(1) above, the following provision is made for extending the facility of change of cadre from Typist to Assistant and vice-versa to UAS employees as per the Cadre & Recruitment Regulations and subject to availability of vacancies:

**SCHEDULE**

| Existing | | | Approved amendment | | |
|---|---|---|---|---|---|
| Category of post/ s and scale of pay | Method of Recruit-ment | Qualifications/ Eligibility | Category of post/ s and scale of pay | Method of Recruit-ment | Qualifications/ Eligibility |
| 38. Assistant/ Processing Assistant/ Computer Assistant (159+3+2) Rs.4150-7800 | By Direct recruit-ment only | a) Must possess a degree of recognized University.<br>b) Experience in computation work and experience in data compilation is desirable.<br>**NOTE:** Should pass Accounts Higher Examination before declaration of Probation. | No change | By Direct recruit-ment and by change of cadre from Typist to Assistant | **FOR DIRECT RECRUITMENT**<br>a) Must possess a degree of recognized University.<br>b) Experience in computation work and experience in data compilation is desirable.<br>**NOTE:** Should pass Accounts Higher Examination before declaration of Probation. |

| Existing | | | Approved amendment | | |
|---|---|---|---|---|---|
| Category of post/ s and scale of pay | Method of Recruit-ment | Qualifications/ Eligibility | Category of post/ s and scale of pay | Method of Recruit-ment | Qualifications/ Eligibility |
| | | | | | **FOR CHANGE OF CADRE** a) Must have put in not less than five years of service excluding the period of probation in the cadre of Typist. b) Must have passed Accounts Higher Examination. c) As per GO and Karnataka Civil Services (Typists and Junior Assistants/Second Division Assistants (Change of Cadre) Rules, 1964 and amended from time to time. |

BY ORDER,
**M.B. CHETTI**
REGISTRAR

**UNIVERSITY OF AGRICULTURAL SCIENCES, DHARWAD**
**Office of the Registrar, Yattinagudda Campus, Krishingar, Dharwad-580 005, Karnataka**
**NOTIFICATION**
**No.R/B-114/2006, Dated: 13th July 2006**

**Sub:** Creation of the posts of Asst. Executive Engineer (Civil) in UAS, Dharwad.

**Ref:** 1) Recommendations of the Committee constituted to examine representations of Asst. Engineers (Civil)
2) Proceedings of the 113th meeting of the Board of Regents, UAS, Dharwad, held on 31.12.2005.
3) Govt. letter No. AHD 47 UAS 2006, dated: 20.3.2006.
4) Resolution on Item No.58 of the Proceedings of the 114th meeting of the Board of Regents, UAS, Dharwad, held on 08.06.2006.
5) Approval of the Vice-Chancellor, UAS, Dharwad.

In pursuance to the resolution of the Board of Regents, UAS, Dharwad vide ref.(4) above, four posts of Asst. Executive Engineer (Civil) have been created in view of increase in civil works on all the campuses w.e.f. 31.12.2005, i.e., the date of 113th meeting of the Board of Regents, UAS, Dharwad, by making suitable amendment to the Cadre & Recruitment Regulations of UAS, Dharwad, as follows:

| Category of post/ s and scale of pay |
|---|
| 9. Asst. Exec. Engineer (Civil)/ Elect/ Auto) including Technical Asst. (Civil) to Estate Officer **(13 instead of 9) Civil-9 instead of 5** (Rs.7400-13120) |

The pay scales, duties, responsibilities and service conditions shall be on par with other similar posts existing in the University.

BY ORDER,
PD-84
**M.B. CHETTI**
REGISTRAR

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ.7/ಡಿಸಿಪಿ/ಸಂ.ಪೂ/2006, ದಿನಾಂಕ: 16ನೇ ಜೂನ್ 2006**

ಬೆಂಗಳೂರು ನಗರ – ಫ್ರೇಜರ್‌ಟೌನ್ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಗೆ ಸೇರಿರುವ ಕಾಕ್ಸ್‌ಟೌನ್ ಐ.ಟಿ.ಸಿ ಬಳಿ ರೈಲ್ವೆ ಗೇಟ್‌ನ ಮೇಲ್ಸೇತುವೆ ನಿರ್ಮಾಣದ ಕಾಮಗಾರಿ ಕೆಲಸವು ಪ್ರಗತಿಯಲ್ಲಿದ್ದು ರೈಲ್ವೆ ಮೇಲ್ಸೇತುವೆಯ ಕಾರ್ಯವು ಶೀಘ್ರವಾಗಿ ನಿರ್ಮಾಣ ಮಾಡಲು ಅನುಕೂಲವಾಗುವಂತೆ ವೀಲರ್ ರಸ್ತೆಯಿಂದ ಹಾಗೂ ಬಾಣಸವಾಡಿ ಮುಖ್ಯ ರಸ್ತೆಯಿಂದ ಬಂದು ಈ ರೈಲ್ವೆ ಗೇಟ್ ಮುಖಾಂತರ ಸಾಗುವ ಸಂಚಾರವನ್ನು ಪೂರ್ಣವಾಗಿ ಸ್ಥಗಿತಗೊಳಿಸಿ ಸಾರ್ವಜನಿಕರ ಹಿತದೃಷ್ಠಿಯಿಂದ ಹಾಗೂ ಸುಗಮ ಸಂಚಾರದ ಉದ್ದೇಶದಿಂದ ವಾಹನಗಳ ಸಂಚಾರವನ್ನು ಪರ್ಯಾಯ ರಸ್ತೆಗಳ ಮೂಲಕ ಸಂಚರಿಸುವಂತೆ ವ್ಯವಸ್ಥೆ ಮಾಡಿಕೊಡುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬಿಪಿನ್ ಗೋಪಾಲಕೃಷ್ಣ, ಐ.ಪಿ.ಎಸ್, ಪೊಲೀಸ್ ಕಮೀಷನರ್ (ಪ್ರಭಾರ) ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧಗಳನ್ನು ಆದೇಶಿಸಿರುತ್ತೇನೆ.

1. ಬಾಣಸವಾಡಿ ಮುಖ್ಯ ರಸ್ತೆಯಲ್ಲಿ ಹಾಗೂ ವೀಲರ್ ರಸ್ತೆ ಬಡಾವಣೆ ಕಡೆಯಿಂದ ಬಂದು ರೈಲ್ವೆ ಗೇಟ್ ಮೂಲಕ ವೀಲರ್ ರಸ್ತೆಗೆ ಸಾಗುತ್ತಿದ್ದ ಸಂಚಾರವನ್ನು ರೈಲ್ವೆ ಗೇಟ್ ಬಳಿಯ ಐಟಿಸಿ ಜಂಕ್ಷನ್‌ನಲ್ಲಿ ನಿರ್ಬಂಧಿಸಿ ಈ ಸಂಚಾರವು ಪಾಟರೀ ರಸ್ತೆಯಲ್ಲಿ ಮುಂದುವರಿದು ಲಾಜರ್ ರಸ್ತೆ ರೈಲ್ವೆ ಕೆಳ ಸೇತುವೆ ಮುಖಾಂತರ ಸಂಚರಿಸಲು ಅನುವು ಮಾಡಿಕೊಡಲಾಗಿದೆ.
2. ವೀಲರ್ ರಸ್ತೆ ಮತ್ತು ಎಂ.ಎಂ ರಸ್ತೆಯಲ್ಲಿ ಬಂದು ಕಾಕ್ಸ್‌ಟೌನ್ ವೃತ್ತದ ಮೂಲಕ ರೈಲ್ವೆ ಗೇಟ್ ಮಾರ್ಗವಾಗಿ ವೀಲರ್ ರಸ್ತೆ ಬಡಾವಣೆ ಮತ್ತು ಬಾಣಸವಾಡಿ ಮುಖ್ಯ ರಸ್ತೆಗೆ ಸಾಗುತ್ತಿದ್ದ ಸಂಚಾರವನ್ನು ಕಾಕ್ಸ್‌ಟೌನ್ ವೃತ್ತದಲ್ಲಿಯೇ ನಿರ್ಬಂಧಿಸಿ ಈ ಸಂಚಾರವು ಎಂ.ಎಂ ರಸ್ತೆಯಲ್ಲಿ ಮುಂದುವರಿದು ಮಾಸ್ಕ್ ವೃತ್ತದಲ್ಲಿ ಬಲ ತಿರುವು ಪಡೆದು ಕ್ಲಾರೆನ್ಸ್ ವೃತ್ತದ ಮೂಲಕ ಪಾಟರಿ ರಸ್ತೆ ಮಾರ್ಗವಾಗಿ ಸಂಚರಿಸಲು ಅನುವು ಮಾಡಿಕೊಡಲಾಗಿದೆ.
3. ಫ್ರೇಜರ್‌ಟೌನ್ ಸಂಚಾರ ಪೊಲೀಸ್ ಠಾಣೆ ಮುಂಭಾಗ ಲಾಜರ್ ರಸ್ತೆ ಮತ್ತು ಎಂ.ಎಂ ರಸ್ತೆಗಳಲ್ಲಿ ಬಂದು ರೈಲ್ವೆ ಕೆಳಸೇತುವೆ ಮೂಲಕ ಪಾಟರೀ ರಸ್ತೆಗೆ ಸಂಚರಿಸುವುದನ್ನು ನಿಷೇಧಿಸಲಾಗಿದೆ.
4. ಲಾಜರ್ ರಸ್ತೆಯಲ್ಲಿ ಬುದ್ಧವಿಹಾರ್ ರಸ್ತೆಯ ಆಂಜನೇಯ ದೇವಸ್ಥಾನದ ಜಂಕ್ಷನ್‌ನಿಂದ ಲಾಜರ್ ರಸ್ತೆ–ಎಂ.ಎಂ ರಸ್ತೆ ಜಂಕ್ಷನ್‌ವರೆಗೆ (ಫ್ರೇಜರ್‌ಟೌನ್ ಸಂಚಾರ ಪೊಲೀಸ್ ಠಾಣೆ ಮುಂಭಾಗ) ಹಾಲಿ ಇರುವ ದ್ವಿಮುಖ ಸಂಚಾರ ವ್ಯವಸ್ಥೆಯಲ್ಲಿ ಉತ್ತರದಿಂದ ದಕ್ಷಿಣ ದಿಕ್ಕಿಗೆ ಸಾಗುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಇಟ್ಟುಕೊಂಡು ದಕ್ಷಿಣದಿಂದ ಉತ್ತರಕ್ಕೆ ಸಾಗುವ ಸಂಚಾರವನ್ನು ಅಂದರೆ ಬುದ್ಧವಿಹಾರ್ ರಸ್ತೆಯ ಆಂಜನೇಯ ದೇವಸ್ಥಾನದ ಜಂಕ್ಷನ್‌ನಿಂದ ಲಾಜರ್ ರಸ್ತೆ–ಎಂ.ಎಂ ರಸ್ತೆ ಜಂಕ್ಷನ್‌ವರೆಗೆ ಸಂಚರಿಸುವ ಎಲ್ಲಾ ತರಹದ ವಾಹನಗಳ ಸಂಚಾರವನ್ನು ನಿಷೇಧಿಸಲಾಗಿದೆ. ಸಿಂಧಿ ಕಾಲೋನಿ ಕಡೆಯಿಂದ ಬುದ್ಧವಿಹಾರ್ ರಸ್ತೆಯಲ್ಲಿ ಬಂದು ಆಂಜನೇಯ ದೇವಸ್ಥಾನ ಜಂಕ್ಷನ್‌ನಲ್ಲಿ ಲಾಜರ್ ರಸ್ತೆಗೆ ಸಂಚರಿಸುವ ಸಂಚಾರವನ್ನು ಆಂಜನೇಯ ದೇವಸ್ಥಾನ ಜಂಕ್ಷನ್‌ನಲ್ಲಿ ನಿರ್ಬಂಧಿಸಿ ಈ ಸಂಚಾರವನ್ನು ಕೆಂಚಪ್ಪ ರಸ್ತೆಯಲ್ಲಿ ಸಾಗಿ ಎಂ.ಎಂ ರಸ್ತೆಯನ್ನು ಸೇರಿ ಮುಂದೆ ಸಾಗಲು ಅನುವು ಮಾಡಿಕೊಡಲಾಗಿದೆ.
5. <u>ಕೆಂಚಪ್ಪ ರಸ್ತೆ:</u> ಬುದ್ಧ ವಿಹಾರ್ ರಸ್ತೆಯ ಆಂಜನೇಯ ದೇವಸ್ಥಾನದ ಜಂಕ್ಷನ್‌ನಿಂದ ಎಂ.ಎಂ. ರಸ್ತೆ–ಕೆಂಚಪ್ಪ ರಸ್ತೆ ಜಂಕ್ಷನ್‌ವರೆಗೆ ಹಾಲಿ ಇರುವ ದ್ವಿಮುಖ ಸಂಚಾರ ವ್ಯವಸ್ಥೆಯಲ್ಲಿ ಬುದ್ಧ ವಿಹಾರ್ ರಸ್ತೆಯ ಆಂಜನೇಯ ದೇವಸ್ಥಾನದ ಜಂಕ್ಷನ್‌ನಿಂದ ಎಂ.ಎಂ. ರಸ್ತೆ–ಕೆಂಚಪ್ಪ ರಸ್ತೆ ಜಂಕ್ಷನ್‌ವರೆಗೆ ಸಾಗುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ಎಂ.ಎಂ ರಸ್ತೆ–ಕೆಂಚಪ್ಪ ರಸ್ತೆ ಜಂಕ್ಷನ್‌ನಿಂದ ಬುದ್ಧವಿಹಾರ್ ರಸ್ತೆಯ ಆಂಜನೇಯ ದೇವಸ್ಥಾನದ ಜಂಕ್ಷನ್‌ವರೆಗೆ ಸಾಗುವ ಸಂಚಾರವನ್ನು ನಿಷೇಧಿಸಲಾಗಿದೆ.
6. ಎಂ.ಎಂ. ರಸ್ತೆಯಲ್ಲಿ ಮಾಸ್ಕ್ ರಸ್ತೆ–ಎಂ.ಎಂ. ರಸ್ತೆ ಜಂಕ್ಷನ್‌ನಿಂದ ಕ್ಲಾರೆನ್ಸ್ ರಸ್ತೆ ಜಂಕ್ಷನ್‌ವರೆಗೆ ಹಾಲಿ ಇರುವ ದ್ವಿಮುಖ ಸಂಚಾರ ವ್ಯವಸ್ಥೆಯಲ್ಲಿ ಉತ್ತರದಿಂದ ದಕ್ಷಿಣ ದಿಕ್ಕಿಗೆ ಸಾಗುವ ಅಂದರೆ ಎಂ.ಎಂ. ರಸ್ತೆ–ಮಾಸ್ಕ್ ರಸ್ತೆ ಜಂಕ್ಷನ್‌ನಿಂದ ಕ್ಲಾರೆನ್ಸ್ ರಸ್ತೆ ಜಂಕ್ಷನ್ ಕಡೆಗೆ ಸಾಗುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ಕ್ಲಾರೆನ್ಸ್ ರಸ್ತೆ ಜಂಕ್ಷನ್‌ನಿಂದ ಎಂ.ಎಂ. ರಸ್ತೆ–ಮಾಸ್ಕ್ ರಸ್ತೆ ಜಂಕ್ಷನ್ ಕಡೆಗೆ ದಕ್ಷಿಣದಿಂದ ಉತ್ತರ ದಿಕ್ಕಿಗೆ ಸಾಗುವ ಸಂಚಾರವನ್ನು ನಿಷೇಧಿಸಲಾಗಿದೆ.
7. ಬುದ್ಧವಿಹಾರ್ ರಸ್ತೆಯಲ್ಲಿ ಸಿಂಧಿ ಕಾಲೋನಿಯಿಂದ ಆಂಜನೇಯ ದೇವಸ್ಥಾನದ ಜಂಕ್ಷನ್‌ವರೆಗೆ ಹಾಗೂ ಕೆಂಚಪ್ಪ ರಸ್ತೆಯಲ್ಲಿ ಆಂಜನೇಯ ದೇವಸ್ಥಾನ ಜಂಕ್ಷನ್‌ನಿಂದ ಎಂ.ಎಂ ರಸ್ತೆವರೆಗೆ ರಸ್ತೆಯ ಉತ್ತರ ಬದಿಯಲ್ಲಿ ಎಲ್ಲಾ ತರಹದ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 25–06––2006 ರಿಂದ ರೈಲ್ವೆ ಮೇಲ್ಸೇತುವೆ ಕಾಮಗಾರಿ ಪೂರ್ಣಗೊಳ್ಳುವವರೆಗೆ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 16–06–2006 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಬಿಪಿನ್ ಗೋಪಾಲಕೃಷ್ಣ**

ಪೊಲೀಸ್ ಕಮೀಷನರ್ (ಪ್ರಭಾರ), ಬೆಂಗಳೂರು ನಗರ.

ಪಿ.ಆರ್. 1025

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ.4/ಡಿಸಿಪಿ/ಸಂ.ಪೂ/2006, ದಿನಾಂಕ: 30ನೇ ಜೂನ್ 2006**

ಬೆಂಗಳೂರು ನಗರ – ಹೈಗ್ರೌಂಡ್ಸ್ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿನ ರೇಸ್‌ಕೋರ್ಸ್ ರಸ್ತೆಯು ಪೂರ್ವ ತುದಿಯು ಬಸವೇಶ್ವರ ವೃತ್ತದಿಂದ ಪ್ರಾರಂಭವಾಗಿ ಟ್ರೈಲೈಟ್ ಜಂಕ್ಷನ್ – ಆರ್.ಎಂ.ಬಿ ಆರಾಧ್ಯ ವೃತ್ತ – ಸಿ. ರಂಗಸ್ವಾಮಿ ವೃತ್ತದ (ಜೆ.ಡಿ.ಎಸ್ ಕಛೇರಿ ಜಂಕ್ಷನ್) ಮೂಲಕ ಹಾಯ್ದು ಆನಂದರಾವ್ ವೃತ್ತದಲ್ಲಿ ಕೊನೆಗೊಳ್ಳುತ್ತದೆ. ಆನಂದರಾವ್ ವೃತ್ತದಿಂದ ರಂಗಸ್ವಾಮಿ ವೃತ್ತದವರೆಗೆ ಏಕಮುಖ ಸಂಚಾರ ವ್ಯವಸ್ಥೆ ಇರುತ್ತದೆ. (ಅಂದರೆ ಆನಂದರಾವ್ ವೃತ್ತದಿಂದ ವಾಹನಗಳು ಬರಬಹುದಾಗಿದ್ದು ವಿರುದ್ಧ ದಿಕ್ಕಿನ ವಾಹನ ಸಂಚಾರವನ್ನು ನಿಷೇಧಿಸಲಾಗಿದೆ). ರಂಗಸ್ವಾಮಿ ವೃತ್ತದಿಂದ ಟ್ರೈಲೈಟ್ ಜಂಕ್ಷನ್‌ವರೆಗೂ ದ್ವಿಮುಖ ಸಂಚಾರ ವ್ಯವಸ್ಥೆ ಇರುತ್ತದೆ. ಟ್ರೈಲೈಟ್ ಜಂಕ್ಷನ್‌ನಿಂದ ಬಸವೇಶ್ವರ ವೃತ್ತದವರೆಗೆ ರಸ್ತೆಯ ಮಧ್ಯದಲ್ಲಿ ಮೀಡಿಯನ್ ಇದ್ದು ಜೋಡಿ ರಸ್ತೆಯಾಗಿರುತ್ತದೆ. ರೇಸ್‌ಕೋರ್ಸ್ ರಸ್ತೆಯ ಇಕ್ಕೆಲಗಳಲ್ಲೂ ಖ್ಯಾತ ಶಿಕ್ಷಣ ಸಂಸ್ಥೆಗಳು, ಸರ್ಕಾರಿ ಕಛೇರಿಗಳು, ರೇಸ್‌ಕೋರ್ಸ್, ಪ್ರಖ್ಯಾತ ಹೋಟೆಲ್‌ಗಳು ಮುಂತಾದ ವಾಣಿಜ್ಯೋದ್ಯಮ ಸಂಸ್ಥೆಗಳಿದ್ದು ಸದಾ ಸಂಚಾರ ದಟ್ಟಣೆಯಿಂದ ಕೂಡಿರುತ್ತದೆ. ಈ ರಸ್ತೆಯಲ್ಲಿ ವಾಹನಗಳ ನಿಲುಗಡೆಯಿಂದ ಸುಗಮ ಸಂಚಾರಕ್ಕೆ ಅಡಚಣೆ ಉಂಟಾಗುತ್ತಿದ್ದು ಅಪಘಾತಗಳಿಗೂ ಕಾರಣವಾಗುತ್ತದೆ. ರೇಸ್‌ಕೋರ್ಸ್ ರಸ್ತೆಯಲ್ಲಿ ಸುಗಮ ಸಂಚಾರದ ದೃಷ್ಟಿಯಿಂದ ಸದರಿ ರಸ್ತೆಯಲ್ಲಿ ಬಿ.ಎಂ.ಟಿ.ಸಿ ಬಸ್ಸುಗಳ ನಿಲುಗಡೆಯನ್ನು ಹಾಗೂ ಅಧಿಕೃತ ಆಟೋರಿಕ್ಷಾ ನಿಲ್ದಾಣದಲ್ಲಿ ಆಟೋರಿಕ್ಷಾಗಳ ನಿಲುಗಡೆಯನ್ನು ಹೊರತುಪಡಿಸಿ ಇತರೆ ಎಲ್ಲಾ ತರಹದ ವಾಹನಗಳ ನಿಲುಗಡೆಯನ್ನು ನಿಷೇಧಿಸಿ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎನ್. ಅಚ್ಯುತರಾವ್, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ರೇಸ್‌ಕೋರ್ಸ್ ರಸ್ತೆಯಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಿ ಕೆಳಕಂಡಂತೆ ಆದೇಶಿಸಿರುತ್ತೇನೆ.

**ರೇಸ್‌ಕೋರ್ಸ್ ರಸ್ತೆ ಬಸವೇಶ್ವರ ವೃತ್ತದಿಂದ ಆನಂದರಾವ್ ವೃತ್ತದವರೆಗೂ ರಸ್ತೆಯ ಎರಡೂ ಬದಿಗಳಲ್ಲಿ (ಬಿ.ಎಂ.ಟಿ.ಸಿ ಬಸ್ ನಿಲುಗಡೆಗಳು ಹಾಗೂ ಅಧಿಕೃತ ಆಟೋರಿಕ್ಷಾ ನಿಲ್ದಾಣಗಳಲ್ಲಿ ಆಟೋಗಳ ನಿಲುಗಡೆಯನ್ನು ಹೊರತುಪಡಿಸಿ) ಎಲ್ಲಾ ತರಹದ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.**

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಅಗತ್ಯವಾದ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 03–07–2006 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 30–06–2006 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎನ್. ಅಚ್ಯುತರಾವ್**

ಪಿ.ಆರ್. 1029 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ.7/ಡಿಸಿಪಿ/ಸಂ.ಪೂ/2006, ದಿನಾಂಕ: 1ನೇ ಜುಲೈ 2006**

ಬೆಂಗಳೂರು ನಗರದ ಸಿಲ್ವರ್ ಜ್ಯೂಬಿಲಿ ಪಾರ್ಕ್ ರಸ್ತೆಯ ಜಾಮಿಯಾ ಮಸೀದಿ ರಸ್ತೆ ಕ್ರಾಸ್‌ನಿಂದ ಟೌನ್‌ಹಾಲ್ ಜಂಕ್ಷನ್‌ವರೆಗೂ ರಸ್ತೆ ದುರಸ್ಥಿ ಕಾಮಗಾರಿ ನಡೆಯುತ್ತಿದ್ದು, ಹಾಳಾಗಿರುವ ಸಿಮೆಂಟ್ ರಸ್ತೆಯನ್ನು ಅಗೆದು ತೆಗೆದು ಪುನ: ಹೊಸದಾಗಿ ಸಿಮೆಂಟ್ ರಸ್ತೆ ಮಾಡುತ್ತಿದ್ದು, ಈ ರಸ್ತೆ ದುರಸ್ಥಿ ಕಾಮಗಾರಿ ಕೆಲಸವು ಪೂರ್ಣಗೊಳ್ಳಲು ಸುಮಾರು 1 ತಿಂಗಳ ಕಾಲಾವಧಿ ಹಿಡಿಯುವುದರಿಂದ, ಈ ರಸ್ತೆಯಲ್ಲಿನ ವಾಹನ ಸಂಚಾರವನ್ನು ಪೂರ್ಣವಾಗಿ ಸ್ಥಗಿತಗೊಳಿಸಿ ಸಾರ್ವಜನಿಕರ ಹಿತದೃಷ್ಠಿಯಿಂದ ಹಾಗೂ ಸುಗಮ ಸಂಚಾರದ ಉದ್ದೇಶದಿಂದ ಸಂಚಾರವನ್ನು ಪರ್ಯಾಯ ರಸ್ತೆಗಳ ಮೂಲಕ ಸಂಚರಿಸುವಂತೆ ವ್ಯವಸ್ಥೆ ಮಾಡಿಕೊಡುವುದು ಅಗತ್ಯವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎನ್. ಅಚ್ಯುತರಾವ್, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಸಿಲ್ವರ್ ಜ್ಯೂಬಿಲಿ ಪಾರ್ಕ್ ರಸ್ತೆಯ ಜಾಮೀಯ ಮಸೀದಿ ರಸ್ತೆ ಕ್ರಾಸ್‌ನಿಂದ ಟೌನ್‌ಹಾಲ್ ಜಂಕ್ಷನ್‌ವರೆಗೆ ಎಲ್ಲಾ ತರಹದ ವಾಹನಗಳ ಸಂಚಾರವನ್ನು ನಿಷೇಧಿಸಿರುತ್ತೇನೆ. ಹಾಗೂ ಸುಗಮ ಸಂಚಾರದ ದೃಷ್ಠಿಯಿಂದ ಪರ್ಯಾಯ ವ್ಯವಸ್ಥೆಯನ್ನು ಕೆಳಕಂಡಂತೆ ಕಲ್ಪಿಸಿ ಆದೇಶಿಸಿರುತ್ತೇನೆ.

1. ನರಸಿಂಹರಾಜ ರಸ್ತೆಯಲ್ಲಿ ಟೌನ್‌ಹಾಲ್ ಜಂಕ್ಷನ್‌ನಿಂದ ಬಿ. ಉಸ್ಮಾನ್‌ಖಾನ್ ರಸ್ತೆ ಜಂಕ್ಷನ್‌ವರೆಗೆ ದಕ್ಷಿಣ ಪಾರ್ಶ್ವದಲ್ಲಿ ಪ್ರಸ್ತುತ ಇರುವ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.
2. ನರಸಿಂಹರಾಜ ರಸ್ತೆಯಲ್ಲಿ ಟೌನ್‌ಹಾಲ್ ಜಂಕ್ಷನ್‌ನಿಂದ ಸಿಟಿ ಮಾರ್ಕೆಟ್ ಕಡೆಗಿನ ಮೇಲ್ಸೇತುವೆಯ ಜಂಕ್ಷನ್‌ವರೆವಿಗೂ ರಸ್ತೆಯ ಮಧ್ಯಭಾಗದಲ್ಲಿ ಸಿಮೆಂಟ್ ಮೀಡಿಯನ್ ನಿರ್ಮಿಸಿ ದ್ವಿಮುಖ ಸಂಚಾರ ವ್ಯವಸ್ಥೆ ಕಲ್ಪಿಸಲಾಗಿದೆ.

3. ಕಲಾಸಿಪಾಳ್ಯಂನಿಂದ ಹೊರಡುವ ಎಲ್ಲಾ ಖಾಸಗಿ ಬಸ್ಸುಗಳು ಕಲಾಸಿಪಾಳ್ಯಂ ಮುಖ್ಯ ರಸ್ತೆ ಮುಖಾಂತರ ಬಸಪ್ಪ ವೃತ್ತದ ಕಡೆಗೆ ಸಾಗಿ ಮುಂದುವರಿದು ಸಾಗಲು ಅನುವು ಮಾಡಿಕೊಡಲಾಗಿದೆ.
4. ಮೈಸೂರು ರಸ್ತೆ ಕಡೆಯಿಂದ ಮೇಲ್ಸೇತುವೆ ಮೇಲಿನಿಂದ ಟೌನ್‌ಹಾಲ್ ಕಡೆಗೆ ಬರುವ ಎಲ್ಲಾ ವಾಹನಗಳು ಮೇಲ್ಸೇತುವೆ ಇಳಿಜಾರಿನಲ್ಲಿ ಇಳಿದು ನರಸಿಂಹರಾಜ ರಸ್ತೆಯ ಮುಖಾಂತರ ಕುಂಬಾರಗುಂಡಿ ವರೆಗೂ ಬಂದು ಎಡತಿರುವು ಪಡೆದು ಬಸ್ಸುಗಳು ಮಾತ್ರ ದಾಸಪ್ಪ ಆಸ್ಪತ್ರೆ ಮುಂಭಾಗದಿಂದ ಟೌನ್‌ಹಾಲ್ ಜಂಕ್ಷನ್ ಕಡೆಗೆ ಸಾಗಬಹುದಾಗಿದ್ದು, ಇತರೆ ಎಲ್ಲಾ ವಾಹನಗಳು ಪೈಲ್ವಾನ್ ಕೃಷ್ಣಪ್ಪ ರಸ್ತೆಯ ಮುಖಾಂತರ ಓ.ಟಿ.ಸಿ ರಸ್ತೆಯ ಕಡೆಗೆ ಹೋಗಿ ನರಸಿಂಹರಾಜ ವೃತ್ತದ ಕಡೆಗೆ ಸಾಗಲು ವ್ಯವಸ್ಥೆ ಕಲ್ಪಿಸಲಾಗಿದೆ.
5. ಮೈಸೂರು ರಸ್ತೆ ಕಡೆಯಿಂದ ಸಿಟಿ ಮಾರ್ಕೆಟ್ ಜಂಕ್ಷನ್‌ಗೆ ಬಂದಂತಹ ಎಲ್ಲಾ ವಾಹನಗಳು ಬಲತಿರುವು ಪಡೆದು ಕಲಾಸಿಪಾಳ್ಯಂ ಮುಖ್ಯ ರಸ್ತೆಯ ಕಡೆಗೆ (ಪ್ರದೀಪ್ ಚಿತ್ರಮಂದಿರದ ಕಡೆಗೆ) ಸಾಗಬಹುದು. ಅಥವಾ ಜಾಮೀಯ ಮಸೀದಿ ಜಂಕ್ಷನ್‌ವರೆಗೆ ಬಂದು ಬಲತಿರುವು ಪಡೆದು ಎನ್.ಆರ್. ರಸ್ತೆಯ ಕ್ರಾಸ್ ಮುಖಾಂತರ ಬಿ. ಉಸ್ಮಾನ್‌ಖಾನ್ (ಬಂಬೂ ಬಜಾರ್) ರಸ್ತೆಯ ಕಡೆಗೆ ಹೋಗಿ ನಂತರ ಕಲಾಸಿಪಾಳ್ಯಂ ಮುಖ್ಯ ರಸ್ತೆಯ ಕಡೆಗೆ ಸಾಗಿ ಬಸಪ್ಪ ವೃತ್ತದಲ್ಲಿ ಎಡತಿರುವು ಪಡೆದು ಮಿನರ್ವ ವೃತ್ತದ ಮುಖಾಂತರ ಜೆ.ಸಿ. ರಸ್ತೆಯಲ್ಲಿ ಮುಂದಕ್ಕೆ ಸಾಗಲು ಅನುವು ಮಾಡಿಕೊಡಲಾಗಿದೆ.
6. ಜಾಮೀಯಾ ಮಸೀದಿ ಪಕ್ಕದಲ್ಲಿ (ಉತ್ತರದ ಪಾರ್ಶ್ವಕ್ಕೆ) ಹೊಸದಾಗಿ ನಿರ್ಮಿಸಿರುವ ಸಿಮೆಂಟ್ ರಸ್ತೆಯಲ್ಲಿ ಬಿ.ಎಂ.ಟಿ.ಸಿ ವಾಹನಗಳಿಗೆ ನಿಲುಗಡೆಯನ್ನು ಕಲ್ಪಿಸಲಾಗಿದೆ. ಇಲ್ಲಿಂದ ಹೊರಡುವ ಸಂಚಾರವು ಬಲಕ್ಕೆ ತಿರುಗಿ ಮಸೀದಿ ಮುಂಭಾಗದಲ್ಲಿ ಸಾಗಿ ನೇರವಾಗಿ ನರಸಿಂಹರಾಜ ರಸ್ತೆ ಕ್ರಾಸ್ ಮುಖಾಂತರ ಬಂಬೂ ಬಜಾರ್ ಕಡೆಗೆ ಸಾಗಿ ಕಲಾಸಿಪಾಳ್ಯಂ ಮುಖ್ಯ ರಸ್ತೆ ಮುಖಾಂತರ ಮುಂದುವರಿದು ಸಾಗಲು ವ್ಯವಸ್ಥೆ ಕಲ್ಪಿಸಲಾಗಿದೆ.
7. ನರಸಿಂಹರಾಜ ರಸ್ತೆ ಕ್ರಾಸ್‌ನಲ್ಲಿ ಬಂಬೂಬಜಾರ್ ವರೆವಿಗೂ ಪ್ರಸ್ತುತ ಇರುವ ವಾಹನಗಳ ನಿಲುಗಡೆಯನ್ನು ಸಂಪೂರ್ಣವಾಗಿ ನಿಷೇಧಿಸಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 06–07–2006 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 01–07–2006 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎನ್. ಅಚ್ಯುತರಾವ್**
ಪೊಲೀಸ್ ಕಮೀಷನರ್, ಬೆಂಗಳೂರು ನಗರ.

ಪಿ.ಆರ್. 1030

## ಕರ್ನಾಟಕ ರಾಜ್ಯ ಚುನಾವಣಾ ಆಯೋಗ, ಆಯೋಗದ ನಡವಳಿಗಳು

**ವಿಷಯ:** ಶಿವಮೊಗ್ಗ ಜಿಲ್ಲಾ ಪಂಚಾಯತಿ ಸಾರ್ವತ್ರಿಕ ಚುನಾವಣೆ 2005 ರಲ್ಲಿ ಆವಿನಹಳ್ಳಿ ಜಿಲ್ಲಾ ಪಂಚಾಯತ್ ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕದ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308-ಸಿ-ಪ್ರಕಾರ ಅನರ್ಹಗೊಳಿಸುವ ಬಗ್ಗೆ.

**ಓದಲಾಗಿದೆ:**
1) ಚುನಾವಣಾಧಿಕಾರಿಗಳು, ಜಿಲ್ಲಾ ಪಂಚಾಯತ್ ಕ್ಷೇತ್ರಗಳು, ಸಾಗರ ತಾಲ್ಲೂಕುರವರ ಪತ್ರ ಸಂಖ್ಯೆ: ಸಾಗರ/ಜಿ.ಪಂ.ಕ್ಷೇತ್ರ: ಚು:ವೆಚ್ಚ/2005-06, ದಿನಾಂಕ: 2.2.2006.
2) ಜಿಲ್ಲಾಧಿಕಾರಿಗಳು ಶಿವಮೊಗ್ಗ ಜಿಲ್ಲೆ, ರವರ ಪತ್ರದ ಸಂಖ್ಯೆ: ಚು(4)/ಸಿಆರ್/40/04-05, ದಿನಾಂಕ: 3.5.2006.
3) ಆಯೋಗದ ನೋಟೀಸು ಸಂಖ್ಯೆ: ರಾಚುಆ/152/ಟಿಜಡ್‌ಪಿ/2005, ದಿನಾಂಕ: 15.3.2006.
4) ಜಿಲ್ಲಾಧಿಕಾರಿಗಳು ಶಿವಮೊಗ್ಗ ಜಿಲ್ಲೆ ರವರ ಪತ್ರ ಸಂಖ್ಯೆ: ಚು(4)/ಸಿಆರ್/4/2004-05, ದಿನಾಂಕ: 19.4.2006.

**ಪ್ರಸ್ತಾವನೆ:**

ಶಿವಮೊಗ್ಗ ಜಿಲ್ಲಾ ಪಂಚಾಯತ್ ಸದಸ್ಯ ಸ್ಥಾನಕ್ಕೆ ಆವಿನಹಳ್ಳಿ ಜಿಲ್ಲಾ ಪಂಚಾಯತ್ ಚುನಾವಣಾ ಕ್ಷೇತ್ರದಿಂದ (ಸಾಗರ ತಾಲ್ಲೂಕು), ಸಾರ್ವತ್ರಿಕ ಚುನಾವಣೆ 2005 ರಲ್ಲಿ ಸ್ಪರ್ಧಿಸಿದ್ದ ಕೆ.ಸಿ.ರಾಮಚಂದ್ರಪ್ಪ ಬಿನ್ ಬಸವನಾಯ್ಕರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308-ಬಿ, ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಪಂಚಾಯತಿ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ವಿನಿಯಮ 3ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕಪತ್ರವನ್ನು ನಿಗದಿತ ನಮೂನೆಯಲ್ಲಿ, ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಚುನಾವಣಾಧಿಕಾರಿಗೆ ಸಲ್ಲಿಸಿರುವುದಿಲ್ಲವೆಂದು ಆ ಕ್ಷೇತ್ರದ ಚುನಾವಣಾಧಿಕಾರಿಗಳು ಉಲ್ಲೇಖ (1)ರ ದಿನಾಂಕ: 2.2.2006ರ ಪತ್ರದಲ್ಲಿ ವರದಿ ಮಾಡಿರುತ್ತಾರೆ. ಶಿವಮೊಗ್ಗ ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ (2) ರ ದಿನಾಂಕ: 3.5.2006ರ ಪತ್ರದಲ್ಲಿಯೂ ಸಹ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308-ಸಿ, ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಪಂಚಾಯತಿ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005 ವಿನಿಯಮ 6ರ ಉಪಖಂಡ 5ರ ಅನುಸಾರ ಆಯೋಗದಿಂದ ಉಲ್ಲೇಖ (3)ರ ದಿನಾಂಕ: 15.3.2006ರ ನೋಟೀಸನ್ನು ಅಭ್ಯರ್ಥಿಗೆ ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 20 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದ್ದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ದಿನಾಂಕ: 31.3.2006 ರಂದು ಅಭ್ಯರ್ಥಿಗೆ ಜಾರಿ ಮಾಡಿ, ಜಿಲ್ಲಾಧಿಕಾರಿಗಳು ಉಲ್ಲೇಖ (4)ರ ದಿನಾಂಕ: 19.4.2006ರ ಪತ್ರದಲ್ಲಿ ವರದಿ ಮಾಡಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಲಾಗಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆಗಳು ಇರುವುದಿಲ್ಲವೆಂದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/103/ಟಿಜಡ್‌ಪಿ/2006, ದಿನಾಂಕ: 6ನೇ ಜುಲೈ 2006**

ಮೇಲೆ ವಿವರಿಸಿರುವಂತೆ ಶಿವಮೊಗ್ಗ ಜಿಲ್ಲಾ ಪಂಚಾಯತ್ ಸದಸ್ಯ ಸ್ಥಾನಕ್ಕೆ ಆವಿನಹಳ್ಳಿ ಜಿಲ್ಲಾ ಪಂಚಾಯತ್ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005 ರಲ್ಲಿ ಸ್ಪರ್ಧಿಸಿದ್ದ ಕೆ.ಸಿ. ರಾಮಚಂದ್ರಪ್ಪ ಬಿನ್ ಬಸವನಾಯ್ಕ ಇವರು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ಇಲ್ಲವೆಂದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು ಅವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308-ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

ಪಿ.ಆರ್. 1070 ಆಯುಕ್ತರು, ರಾಜ್ಯ ಚುನಾವಣಾ ಆಯೋಗ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಯೋಜನಾ ನಿರ್ದೇಶಕರ ಕಛೇರಿ (ಆರ್.ಸಿ.ಹೆಚ್), ಆನಂದರಾವ್ ವೃತ್ತ, ಬೆಂಗಳೂರು

## ಅಧಿಸೂಚನೆ

**ಸಂಖ್ಯೆ: ಎಂ.ಸಿ.ಟಿ./41/2005-06, ದಿನಾಂಕ: 11ನೇ ಜುಲೈ 2006**

**ವಿಷಯ:** ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿಗಾಗಿ ಅರ್ಜಿಗಳನ್ನು ಕರೆಯುವ ಬಗ್ಗೆ.

ರಾಜ್ಯದ 19 ಜಿಲ್ಲೆಗಳಲ್ಲಿರುವ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿ ಶಾಲೆಗಳಲ್ಲಿ 18 ತಿಂಗಳುಗಳ ತರಬೇತಿಗಾಗಿ ಅರ್ಹ ಮಹಿಳಾ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಕರೆಯಲಾಗಿದೆ.

ಅರ್ಜಿಗಳನ್ನು ದಿನಾಂಕ: 19.07.2006 ರಿಂದ ಸಂಬಂಧಪಟ್ಟ ಆಯಾ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳವರ ಕಛೇರಿಯಿಂದ ಪಡೆಯಬಹುದು. ಅರ್ಜಿಗಳನ್ನು ದ್ವಿಪ್ರತಿಗಳಲ್ಲಿ ಸಲ್ಲಿಸಬೇಕು. ದ್ವಿಪ್ರತಿಗಳ ಅರ್ಜಿಯ ಬೆಲೆ 10-00 ರೂ.ಗಳು ನಗದು ಪಾವತಿ ಮಾಡಿ ಅರ್ಜಿಗಳನ್ನು ಪಡೆಯಬಹುದು.

ಭರ್ತಿ ಮಾಡಿದ ಅರ್ಜಿಗಳನ್ನು ಆಯಾ ಜಿಲ್ಲೆಗಳ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳವರ ಕಛೇರಿಯಲ್ಲಿ ದಿನಾಂಕ: 18.08.2006 ರವರೆಗೆ ಮಾತ್ರ ಸ್ವೀಕರಿಸಲಾಗುವುದು. ನಿಗದಿತ ನಮೂನೆಯಲ್ಲಿ ಮಾತ್ರ ಅರ್ಜಿಗಳನ್ನು ಸಲ್ಲಿಸಬೇಕು. ನಿಗದಿತ ನಮೂನೆಯಲ್ಲಿಲ್ಲದ ಮತ್ತು ನಿಗದಿತ ದಿನಾಂಕದ ನಂತರ ಬಂದ ಅರ್ಜಿಗಳನ್ನು ಕಡ್ಡಾಯವಾಗಿ ತಿರಸ್ಕರಿಸಲಾಗುವುದು.

1. **ಅರ್ಹತೆ:**
   1. ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.
   2. ವಯೋಮಿತಿ: ಕನಿಷ್ಠ 18 ವರ್ಷಗಳು ಮತ್ತು ಗರಿಷ್ಠ 35 ವರ್ಷಗಳು. (ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ವಯೋಮಿತಿಯನ್ನು ಗಣನೆಗೆ ತೆಗೆದುಕೊಳ್ಳಲಾಗುವುದು)
2. **ಇತರ ನಿಬಂಧನೆಗಳು:**
   1. ಅಭ್ಯರ್ಥಿಗಳು ಭಾರತೀಯ ನಾಗರೀಕರಾಗಿದ್ದು ಕನಿಷ್ಠ 5 ವರ್ಷಗಳು ಕರ್ನಾಟಕ ರಾಜ್ಯದಲ್ಲಿ ವಿದ್ಯಾಭ್ಯಾಸ ಮಾಡಿರಬೇಕು.
3. **ಅರ್ಜಿಯೊಂದಿಗೆ ಸಲ್ಲಿಸಬೇಕಾದ ಲಗತ್ತುಗಳು:**

1) ಅಭ್ಯರ್ಥಿಯು ಸಹಿ ಮಾಡಿರುವ ಪಾಸ್ ಪೋರ್ಟ್ ಸೈಜಿನ ಭಾವಚಿತ್ರಗಳನ್ನು ಎರಡೂ ಅರ್ಜಿಗಳ ಬಲಭಾಗದ ಮೇಲ್ಭಾಗದಲ್ಲಿ ಅಂಟಿಸಬೇಕು.
2) ದೃಢೀಕರಿಸಿದ ಈ ಕೆಳಗಿನ ದಾಖಲೆಗಳನ್ನು ದ್ವಿಪ್ರತಿಗಳಲ್ಲಿ ಸಲ್ಲಿಸಬೇಕು. (ಅ) ಜನ್ಮ ದಿನಾಂಕದ ದಾಖಲೆ (ಆ) ವಿದ್ಯಾರ್ಹತೆಯ ದಾಖಲೆ (ಇ) ಜಾತಿ ವರಮಾನ ಪ್ರಮಾಣ ಪತ್ರ (ಈ) ಜಾತಿ ಪ್ರಮಾಣ ಪತ್ರಗಳನ್ನು (ಉ) ಅರ್ಜಿಯಲ್ಲಿ ತಿಳಿಸಿರುವ ನಮೂನೆಯಲ್ಲಿ ಸಲ್ಲಿಸುವುದು. (ಊ) ಇಬ್ಬರು ಗಣ್ಯ ವ್ಯಕ್ತಿಗಳಿಂದ ಮತ್ತು ಶಾಲೆಯಿಂದ ಪಡೆದ ನಡವಳಿಕೆ ಪ್ರಮಾಣ ಪತ್ರಗಳು (ಊ) ಅಭ್ಯರ್ಥಿಯು ಸ್ವತಃ ಬರೆದ ಕನ್ನಡ ಬರವಣಿಗೆಯ ಒಂದು ಪುಟ (ಋ) ವೈದ್ಯಕೀಯ ಪ್ರಮಾಣ ಪತ್ರ ಮತ್ತು ಅರ್ಜಿಯಲ್ಲಿ ತಿಳಿಸಿರುವ ಇತರ ಪ್ರಮಾಣ ಪತ್ರಗಳು.

**ಸೂಚನೆಗಳು:**

1. ಅಭ್ಯರ್ಥಿಯು ಅರ್ಜಿಯಲ್ಲಿ ತನ್ನ ಹೆಸರನ್ನು ಮತ್ತು ತಂದೆಯ ಹೆಸರನ್ನು ಎಸ್.ಎಸ್.ಎಲ್.ಸಿ. ಅಂಕಪಟ್ಟಿಯಲ್ಲಿರುವಂತೆ ಬರೆಯಬೇಕು.
2. ಅಭ್ಯರ್ಥಿಯು ಸ್ವತಃ ಅರ್ಜಿಗಳನ್ನು ಯಾವ ಅಂಕಣವನ್ನು ಖಾಲಿ ಬಿಡದಂತೆ ಅರ್ಜಿಯನ್ನು ಸ್ವಹಸ್ತಾಕ್ಷರದಲ್ಲಿ ಭರ್ತಿ ಮಾಡಬೇಕು.
3. ಸಂಬಂಧಿಸಿದ ಅಧಿಕಾರಿಗಳು ನೀಡಿದ ಜಾತಿ ಮತ್ತು ವರಮಾನ ಪ್ರಮಾಣ ಪತ್ರಗಳನ್ನು ಮಾತ್ರ ಪರಿಗಣಿಸಲಾಗುವುದು.
4. ಅಪೂರ್ಣವಾದ ಮತ್ತು ಕೇಳಿರುವ ದಾಖಲೆಗಳನ್ನು ಲಗತ್ತಿಸದಿದ್ದಲ್ಲಿ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
5. ಅಗತ್ಯವಾದ ಇತರ ಮಾಹಿತಿಯನ್ನು ಆಯಾ ಜಿಲ್ಲೆಯ ಆರೋಗ್ಯ ಮತ್ತು ಕು.ಕ ಅಧಿಕಾರಿಯವರಿಂದ ಪಡೆಯಬಹುದು.
6. ಇಲಾಖಾ ಅಭ್ಯರ್ಥಿಗಳು ಮೇಲಾಧಿಕಾರಿಗಳ ಮುಖಾಂತರ ಅರ್ಜಿಗಳನ್ನು ಸಲ್ಲಿಸಬೇಕು.
7. ಅರ್ಜಿ ಮತ್ತು ಇತರ ದಾಖಲೆಗಳನ್ನು ಒಳಗೊಂಡ ಲಕೋಟೆಯ ಮೇಲೆ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯ ತರಬೇತಿಗಾಗಿ ಅರ್ಜಿ ಎಂದು ನಮೂದಿಸಬೇಕು.
8. ಆಯ್ಕೆಯ ಸಂದರ್ಶನ ವೇಳೆಯಲ್ಲಿ ಅಸಮರ್ಪಕ ದೋಷಪೂರಿತ ಅಥವಾ ಸೃಷ್ಟಿಸಿದ ದಾಖಲೆಗಳನ್ನು ಸಲ್ಲಿಸಿರುವುದು ಕಂಡುಬಂದಲ್ಲಿ ಹಾಗೂ ಆಯ್ಕೆಗಾಗಿ ಒತ್ತಡ ಶಿಫಾರಸ್ಸು ಇತರ ಆಮಿಷಗಳನ್ನು ತೋರಿಸುವವರ ವಿರುದ್ಧ ಭಾರತೀಯ ದಂಡ ಸಂಹಿತೆಯನುಸಾರ ಕ್ರಮ ತೆಗೆದುಕೊಳ್ಳುವುದಲ್ಲದೆ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

9. ಗರ್ಭವತಿಯರಾದ ಅಭ್ಯರ್ಥಿಗಳಿಗೆ ತರಬೇತಿ ಸೇರಲು ಅವಕಾಶವಿರುವುದಿಲ್ಲ ಮತ್ತು ತರಬೇತಿ ಅವಧಿಯಲ್ಲಿ ಗರ್ಭವತಿಯಾದ ವಿದ್ಯಾರ್ಥಿನಿಯನ್ನು ತರಬೇತಿಯಿಂದ ಮುಕ್ತಗೊಳಿಸಲಾಗುವುದು.
10. ತರಬೇತಿ ಅವಧಿ: ತರಬೇತಿ ಅವಧಿಯು ತರಬೇತಿ ಪ್ರಾರಂಭದ ದಿನಾಂಕದಿಂದ 18 ತಿಂಗಳುಗಳಾಗಿರುವುದು. ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿಯು ಪ್ರಾರಂಭವಾಗುವ ದಿನಾಂಕವನ್ನು ಸೂಕ್ತ ಸಮಯದಲ್ಲಿ ತಿಳಿಸಲಾಗುವುದು.
11. ತರಬೇತಿ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳಿಗೆ ನೇಮಕಾತಿಯ ಹಕ್ಕು ಪ್ರಾಪ್ತವಾಗುವುದಿಲ್ಲ. ಆಯ್ಕೆಯಾದ ಅಭ್ಯರ್ಥಿಗಳಿಗೆ ಸರ್ಕಾರವು ಶಿಷ್ಯವೇತನವನ್ನು ನೀಡಲಾಗುವುದು. ಶಿಷ್ಯವೇತನವನ್ನು ಪಡೆಯುವ ಅಭ್ಯರ್ಥಿಗಳು ಸರ್ಕಾರದಲ್ಲಿ 3 ವರ್ಷಗಳ ಸೇವೆ ಸಲ್ಲಿಸುವುದಾಗಿ ಜಾಮೀನು ಪತ್ರವನ್ನು ಗೊತ್ತುಪಡಿಸಿದ ನಮೂನೆಯಲ್ಲಿ ಸಲ್ಲಿಸಬೇಕು.
12. ಮೀಸಲಾತಿ: ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ: 08 ಸಹಿಮ 95, ದಿನಾಂಕ: 20.06.1995 ಅನ್ವಯ ಆಯ್ಕೆ ಮಾಡಲಾಗುವುದು.
13. ತರಬೇತಿಯ ಒಟ್ಟು ಸ್ಥಾನಗಳು-570-ಪ್ರತಿ ಜಿಲ್ಲೆಗೆ ಒಟ್ಟು ಸ್ಥಾನಗಳು 30 ಸಾಮಾನ್ಯ ವರ್ಗ - 285, ಮೀಸಲಾತಿ ಸ್ಥಾನಗಳು - 285

**ವರ್ಗೀಕರಣ**

| | |
|---|---|
| ಸಾಮಾನ್ಯ ವರ್ಗ | 11 |
| ಸಾಮಾನ್ಯ ವರ್ಗ (ಗ್ರಾ) | 04 |
| ಪರಿಶಿಷ್ಟ ಜಾತಿ | 03 |
| ಪರಿಶಿಷ್ಟ ಜಾತಿ (ಗ್ರಾ) | 01 |
| ಪರಿಶಿಷ್ಟ ಪಂಗಡ | 01 |
| 2 ಎ | 03 |
| 2 ಎ (ಗ್ರಾ) | 01 |
| 3 ಎ | 01 |
| 2 ಬಿ | 02 |
| 3 ಬಿ | 02 |
| ಪ್ರವರ್ಗ 1 | 01 |

14. ಆಯ್ಕೆಯನ್ನು ಜಾರಿಯಲ್ಲಿರುವ ಮೀಸಲಾತಿ ನಿಯಮಾವಳಿ ಅನುಸಾರ ಮತ್ತು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಆಧಾರದ ಮೇಲೆ ಮಾಡಲಾಗುವುದು.
15. ಆಯ್ಕೆಯ ಸಂಬಂಧದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರ ತೀರ್ಮಾನವೇ ಅಂತಿಮವಾದುದು. ಇದರ ಬಗ್ಗೆ ಯಾವುದೇ ರೀತಿ ಪತ್ರ ವ್ಯವಹಾರವನ್ನು ಮಾಡಲಾಗುವುದಿಲ್ಲ.

ನಿರ್ದೇಶಕರಿಂದ ಅನುಮೋದಿಸಲ್ಪಟ್ಟಿದೆ.

ಪಿ.ಆರ್. 1073 ಯೋಜನಾ ನಿರ್ದೇಶಕರು (ಆರ್.ಸಿ.ಹೆಚ್.)

## ವಿಶೇಷ ಭೂಸ್ವಾಧೀನಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ, ಶಿವಮೊಗ್ಗ ಭೂಸ್ವಾಧೀನ ಕಾಯಿದೆ 1874ರ ಕಲಂ 16(2)ರ ಮೇರೆಗೆ ಪ್ರಕಟಣೆ

**ಕ್ರಮಾಂಕ: ಶಿನಪ್ರಾ/ಭೂಸ್ವಾ/ಸಿಆರ್ 7/2000-01, ದಿನಾಂಕ: 7ನೇ ಜುಲೈ 2006**

ಕರ್ನಾಟಕ ಸರ್ಕಾರದವರು 1963ನೇ ಸಾಲಿನ ಕರ್ನಾಟಕ ಅಧಿನಿಯಮ ಕ್ರಮ ಸಂಖ್ಯೆ: 17 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂಸ್ವಾಧೀನ ಅಧಿನಿಯಮ (1894ನೇ ಸಾಲಿನ ಕೇಂದ್ರ ಅಧಿನಿಯಮ 1ರ) ಪ್ರಕರಣ 16(2) ಮೇರೆಗೆ ಈ ಮೂಲಕ ಅನುಸೂಚಿಯಡಿ ಸೂಚಿಸಲಾದ ಜಮೀನುಗಳನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರದಿಂದ ನಿವೇಶನ ರಚಿಸಿ ಹಂಚಿಕೆ ಮಾಡುವ ಯೋಜನೆಗಾಗಿ ಅನಧಿಕೃತವಾಗಿ ಭೂಸ್ವಾಧೀನ ಅಧಿನಿಯಮದ ಪ್ರಕರಣ 16(1) ರಂತೆ ವಶಪಡಿಸಿಕೊಳ್ಳಲಾಗಿದೆ ಎಂದು ಸಾರ್ವಜನಿಕರಿಗೂ ಹಾಗೂ ಸಂಬಂಧಿಸಿದವರ ತಿಳುವಳಿಕೆಯಾಗಿ ಅಧಿಸೂಚನೆ ನೀಡುವ ಮೂಲಕ ಪ್ರಕಟಿಸಲಾಗಿದೆ.

**ಜಿಲ್ಲೆ: ಶಿವಮೊಗ್ಗ ತಾಲ್ಲೂಕು: ಶಿವಮೊಗ್ಗ ಹೋಬಳಿ: ಕಸಬ ಗ್ರಾಮ: ಸೋಮಿನಕೊಪ್ಪ**

| ಕ್ರಮ ಸಂಖ್ಯೆ | ಸ.ನಂ. | ತರಹೆ | ವಿಸ್ತೀರ್ಣ ಎ-ಗುಂ | ಆಕಾರ | ಸ್ವಾಧೀನಪಡೆದ ದಿನಾಂಕ |
|---|---|---|---|---|---|
| 1 | 2 | 3 | 4 | 5 | 6 |
| 1 | 24/1 | ಕೆರೆತರಿ | 1-00 | 1-25 | 14.06.2006 |
| 2 | 26/1 | ಕೆರೆತರಿ | 4-37 | 5-20 | 14.06.2006 |
| 3 | 24/1 | ಕೆರೆತರಿ | 1-00 | 1-25 | 14.06.2006 |
| 4 | 26/1 | ಕೆರೆತರಿ | 2-18 | 2-60 | 14.06.2006 |
| 5 | 142 | ಖುಷ್ಕಿ ಭಾಗಾಯ್ತು | 4-38 | 5-90 | 14.06.2006 |
| 6 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 7 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 8 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 9 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 10 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 11 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 12 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |

| ಕ್ರಮ ಸಂಖ್ಯೆ | ಸ.ನಂ. | ತರಹೆ | ವಿಸ್ತೀರ್ಣ ಎ-ಗುಂ | ಆಕಾರ | ಸ್ವಾಧೀನಪಡೆದ ದಿನಾಂಕ |
|---|---|---|---|---|---|
| 13 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 14 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 15 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 16 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 17 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 18 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 19 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 20 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 21 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 22 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 23 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 24 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 25 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 26 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 27 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 28 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 29 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 30 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 31 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 32 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 33 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 34 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 35 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 36 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 37 | 36 ಪೈಕಿ | ಖುಷ್ಕಿ | 2-00 | 4-22 | 14.06.2006 |
| 38 | 36 ಪೈಕಿ | ಖುಷ್ಕಿ | 2-00 | 4-22 | 14.06.2006 |
| 39 | 36 ಪೈಕಿ | ಖುಷ್ಕಿ | 2-00 | 4-22 | 14.06.2006 |
| 40 | 36 ಪೈಕಿ | ಖುಷ್ಕಿ | 2-00 | 4-22 | 14.06.2006 |
| 41 | 36 ಪೈಕಿ | ಖುಷ್ಕಿ | 2-00 | 4-22 | 14.06.2006 |
| 42 | 36 ಪೈಕಿ | ಖುಷ್ಕಿ | 2-00 | 4-22 | 14.06.2006 |
| 43 | 36 ಪೈಕಿ | ಖುಷ್ಕಿ | 2-00 | 4-22 | 14.06.2006 |
| 44 | 36 ಪೈಕಿ | ಖುಷ್ಕಿ | 2-00 | 4-22 | 14.06.2006 |
| 45 | 36 ಪೈಕಿ | ಖುಷ್ಕಿ | 2-00 | 4-22 | 14.06.2006 |
| 46 | 36 ಪೈಕಿ | ಖುಷ್ಕಿ | 1-00 | 4-22 | 14.06.2006 |
| 47 | 36 ಪೈಕಿ | ಖುಷ್ಕಿ | 1-00 | 4-22 | 14.06.2006 |
| 48 | 36 ಪೈಕಿ | ಖುಷ್ಕಿ | 2-00 | 4-22 | 14.06.2006 |
| 49 | 36 ಪೈಕಿ | ಖುಷ್ಕಿ | 2-00 | 4-00 | 14.06.2006 |
| 50 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 51 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 52 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 53 | 36 ಪೈಕಿ | ಖುಷ್ಕಿ | 2-00 | 4-25 | 14.06.2006 |
| 54 | 134/1 | ತರಿ | 2-12 | 4-82 | 14.06.2006 |
| 55 | 134/1 | ತರಿ | 2-00 | 4-82 | 14.06.2006 |
| 56 | 134/2 | ತರಿ | 3-18 | 3-87 | 14.06.2006 |
| 57 | 36/13 | ಖುಷ್ಕಿ | 2-00 | 4-25 | 14.06.2006 |
| | | ಒಟ್ಟು | **118-01** | | |

ವಿಶೇಷ ಭೂಸ್ವಾಧೀನಾಧಿಕಾರಿಗಳು, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ, ಶಿವಮೊಗ್ಗ.

ಪಿ.ಡಿ. 82

## ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು

### ಹಿಂದುಳಿದ ವರ್ಗಗಳ ಅಭ್ಯರ್ಥಿಗಳ ಉನ್ನತ ಶಿಕ್ಷಣಕ್ಕೆ ಆರ್ಥಿಕ ನೆರವು

ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಪ್ರವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ ವಿದೇಶಿ ವ್ಯಾಸಂಗಕ್ಕೆ ಆರ್ಥಿಕ ನೆರವು ನೀಡುವ ಕಾರ್ಯಕ್ರಮವನ್ನು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾವತಿಯಿಂದ ಅನುಷ್ಠಾನಗೊಳಿಸಲಾಗುತ್ತಿದೆ. 2006-07ನೇ ಸಾಲಿಗೆ ವಿದೇಶಿ ವಿಶ್ವವಿದ್ಯಾನಿಲಯಗಳಲ್ಲಿ ಉನ್ನತ ವ್ಯಾಸಂಗಕ್ಕಾಗಿ ಆರ್ಥಿಕ ನೆರವು ಒದಗಿಸಲು ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತ ಪ್ರವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ.

- ಸ್ವಯಂ ಚಾಲಿತ ರೋಬೋ ತಾಂತ್ರಿಕತೆ, ಉತ್ಪಾದನಾ ತಂತ್ರಜ್ಞಾನ, ಲೇಜರ್ ತಂತ್ರಜ್ಞಾನ, ಕಾಗದ ತಂತ್ರಜ್ಞಾನ, ನಾವಿಕ ವಾಸ್ತುಶಿಲ್ಪ, ಗಣಕ ತಾಂತ್ರಿಕತೆ, ಮಾಹಿತಿ ತಂತ್ರಜ್ಞಾನ, ಬಹು ಮಾಧ್ಯಮ ಸಂವಹನ, ನೇತ್ರ ತಾಂತ್ರಿಕತೆ, ಕಲಾಪುನರ್ ಸ್ಥಾಪನಾ ತಾಂತ್ರಿಕತೆ, ಪಿಂಗಾಣಿ ಮತ್ತು ಗಾಜಿನ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ಪೆಟ್ರೋಲಿಯಂ ತಂತ್ರಜ್ಞಾನ, ವೈಮಾನಿಕ ಅಥವಾ ಬಾಹ್ಯಾಕಾಶ ತಾಂತ್ರಿಕತೆ, ಇಂಧನ ಸಂಗ್ರಹಣಾ ತಾಂತ್ರಿಕತೆ, ಇಂಧನ ಸಂರಕ್ಷಣೆ, ಪರಮಾಣು ತಾಂತ್ರಿಕತೆ ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ವಿದೇಶಿ ವಿಶ್ವವಿದ್ಯಾಲಯಗಳಲ್ಲಿ ಪೋಸ್ಟ್ ಡಾಕ್ಟರಲ್ (ಪಿಎಚ್‌ಡಿ) ಹಾಗೂ ಸ್ನಾತಕೋತ್ತರ ಪದವಿಯ ಉನ್ನತ ವ್ಯಾಸಂಗ ಮಾಡಲು ಇಚ್ಛಿಸುವ ಅರ್ಹ ಅಭ್ಯರ್ಥಿಗಳು ಅರ್ಜಿ ಸಲ್ಲಿಸಬಹುದು.
- ಅರ್ಹತೆ: 1. ಪದವಿ/ಸ್ನಾತಕೋತ್ತರ ಅಥವಾ ಡಾಕ್ಟರೇಟ್ ಪದವಿಯಲ್ಲಿ ಶೇ.60 ಅಂಕಗಳಿಸಿರಬೇಕು.
- 2. ವಯೋಮಿತಿ: ಅರ್ಜಿ ಸಲ್ಲಿಸಿದ ಕೋರ್ಸು ಪ್ರಾರಂಭವಾಗುವ ದಿನಾಂಕಕ್ಕೆ 35 ವರ್ಷ ಮೀರಿರಬಾರದು.
- 3. ಕುಟುಂಬದ ಮಾಸಿಕ ಆದಾಯ: ರೂ.12,000 ಒಳಗಿರಬೇಕು.
- 4. ಪ್ರಸ್ತುತ ಜಾರಿಯಲ್ಲಿರುವ ದಿ: 30.03.2002ರ ಸರ್ಕಾರಿ ಆದೇಶದನ್ವಯ ಅಭ್ಯರ್ಥಿಗಳು ಹಿಂದುಳಿದ ವರ್ಗಕ್ಕೆ ಸೇರಿದವರಾಗಿರಬೇಕು.

ಆರ್ಥಿಕ ನೆರವನ್ನು ಮೂರು ವರ್ಷಗಳ ಅವಧಿಗೆ, ವಾರ್ಷಿಕವಾಗಿ ಗರಿಷ್ಠ 3.50 ಲಕ್ಷ ರೂ.ನಂತೆ ಅಥವಾ ಇಡೀ ವ್ಯಾಸಂಗದ ಅವಧಿಗೆ ಗರಿಷ್ಠ 10.00 ಲಕ್ಷ ರೂ. ಒದಗಿಸಲಾಗುತ್ತದೆ.

ಅರ್ಹ ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಗಳನ್ನು ಸಂಬಂಧ ಪಟ್ಟ ಜಿಲ್ಲೆಗಳ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಅಧಿಕಾರಿಗಳ ಕಛೇರಿಯಿಂದ ಉಚಿತವಾಗಿ ಪಡೆಯಬಹುದಾಗಿದೆ. ಮತ್ತು ಕಾರ್ಯಕ್ರಮದ ನಿಯಮಗಳ ಮತ್ತು ಷರತ್ತುಗಳ ವಿವರಗಳನ್ನು ಸದರಿ ಕಛೇರಿಯ ಹಾಗೂ ನಿರ್ದೇಶಕರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಕಛೇರಿಯಲ್ಲಿ ಅಂದರೆ, ನಂ.14/3, ಸಿಎಫ್‌ಸಿ ಕಟ್ಟಡ, ನೃಪತುಂಗ ರಸ್ತೆ, ಬೆಂಗಳೂರು (ದೂರವಾಣಿ: 22232105/22232215) ಇಲ್ಲಿನ ಪ್ರಕಟಣಾ ಫಲಕದಲ್ಲಿ ಗಮನಿಸಿ ತಿಳಿಯಬಹುದಾಗಿದೆ. ಭರ್ತಿ ಮಾಡಿದ ಅರ್ಜಿಗಳನ್ನು ಅಗತ್ಯ ದಾಖಲಾತಿಗಳೊಂದಿಗೆ ಸಂಬಂಧಿತ ಜಿಲ್ಲೆಗಳ ಜಿಲ್ಲಾ ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಅಧಿಕಾರಿಗಳ ಕಛೇರಿಗಳಲ್ಲಿ ದಿನಾಂಕ: 14.08.2006 ರೊಳಗೆ ಸಲ್ಲಿಸತಕ್ಕದ್ದು.

ನಿರ್ದೇಶಕರ ಪರವಾಗಿ
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು.

## BACKWARD CLASSES DEPARTMENT, BANGALORE

### Financial Assistance of Higher Education to Backward Classes Candidates.

The Department of Backward Classes Welfare in implementing the scheme of providing financial assistance to Backward Classes and Minority candidates for persuing Higher education in Foreign Universities. Applications are invited from eligible candidates belonging to Backward Classes and Minorities for providing financial assistance to pursue higher education in the universities of foreign countries for the year 2006-07.

Candidates willing to pursue higher studies like post doctoral, Ph.D.&Master's degree in courses viz Automation Robotic including artificial intelligence, Macaronis and Manufacturing Technology, Laser Technology, Paper Technology, Naval Architecture, Information Technology including Computer Engineering Multi-Media Communication, Optometry, Art Restoration Technology, Ceramic and Glass Technology, Bio-Technology, Petroleum Technology, Aircraft Technology / Space Engineering, Composite materials Engineering and Nuclear Engineering etc., in Foreign Universities are eligible to apply.

**Eligibility:**

1. The candidate must have secured 60% marks in Degree/Post Graduation/Ph.D.
2. The candidate must be within 35 years of age as on date of commencement of the course of studies applied for.
3. The monthly income of family of the candidate must be within Rs.12,000/-.
4. The candidate must belong to either of the categories of the Backward Classes as per the existing Govt order Dated: 30.03.2002.

The financial assistance will be sanctioned for 3 years upto a maximum of Rs.3.50 lakhs per annum or a maximum of Rs.10.00 lakhs for the entire duration of the course.

The eligible candidates may obtain the prescribed application form, free of cost from the office of the concerned District officers, Backward Classes and minorities welfare of the district and also go through the rules and regulations of the scheme displayed in notice board and also in the Directorate of

the Department of Backward Classes Welfare, Govt. of Karnataka at No.14/3, CFC Building, Nrupathunga Road, Bangalore-560001 (Telephone.No.22232105/22232215)

The duly filled in application form along with relevant documents should be submitted on or before Dated: 14.08.2006 at the office of the concerned district officer for Backward Classes and Minorities Welfare.

For Director,
Backward Classes Department, Bangalore.

PR-1068

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ವಿಚಕ್ಷಣ ದಳ ಬೆಳಗಾಂವ ಜಿಲ್ಲೆ ಇವರ ನ್ಯಾಯಾಲಯದಲ್ಲಿ**

**ಅಬಕಾರಿ ಉಪ ನಿರೀಕ್ಷಕರು, ವಿಚಕ್ಷಣ ದಳ, ಬೆಳಗಾಂವ ಇವರ ಗುನ್ನೆ ಸಂಖ್ಯೆ: 30/2005-06**

**ಅರ್ಜಿದಾರರು:** ವಿರುದ್ಧ **ಎದುರು ಅರ್ಜಿದಾರರು:**

ಅಬಕಾರಿ ಉಪ ನಿರೀಕ್ಷಕರು,
ವಿಚಕ್ಷಣ ದಳ, ಬೆಳಗಾಂವ

1) ಸುರೇಶ ಚಂದ್ರಪ್ಪ ಉದಪ್ಪನವರ, ಸಾ: ಸುಖಿರ ಪಂಚಾಯತ್, ಮ.ನಂ.510, 20 ಪಾಯಿಂಟ್ ಮಾಪಸಾ ಗೋವಾ. ವಾಹನ ಚಾಲಕ.
2) ಇಮ್ರಾನ ಅಸದ ಶೇಖ, ಸಾ: 787, ಬಡಾವಣೆ, 3 ಕ್ರಾಸ್, ಅಜಂನಗರ, ಬೆಳಗಾಂವ. ವಾಹನ ಚಾಲಕ.
3) ಅಲ್ವಿನ್ ಜಾನ್ ಡಿಸೋಜಾ, ಸಾ: ಮ.ನಂ.610, ಶಾಂತಿ ನಗರ, ಪಣಜಿ, ಗೋವಾ.
4) ತಿಮ್ಮಣ್ಣಾ ಗುಂಡಪ್ಪ ಬಂಡಿವಡ್ಡರ, ಸಾ: ಬಿಸಿಕೇರಿ, ಮುಳಗುಂದ ರೋಡ್, ಗದಗ್.

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪ ನಿರೀಕ್ಷಕರು, ವಿಚಕ್ಷಣ ದಳ, ಬೆಳಗಾಂವ ಇವರು ದಿನಾಂಕ: 18.12.2005 ರಂದು ಬೆಳಿಗ್ಗೆ 4.30 ಗಂಟೆಗೆ ಗೋವಾದಿಂದ ಬೆಳಗಾಂವಿಗೆ ಹೋಗುವ ವಾಯಾ ಖಾನಾಪೂರ ರಸ್ತೆಯ 30ನೇ ಮೈಲುಗಲ್ಲಿನ ಹತ್ತಿರ ರಸ್ತೆಗಾವಲು ಮಾಡುತ್ತಿದ್ದಾಗ ಆರೋಪಿತರು ಟಾಟಾ ಎಲ್‌ಪಿ. ಟ್ರಕ್ ನಂ: ಎಂಎಚ್-09-ಕ್ಯೂ-6219 ಇದರಲ್ಲಿ ಗೋವಾ ಕಡೆಯಿಂದ 290 ಪೆಟ್ಟಿಗೆ ಮದ್ಯವನ್ನು ಲೈಸನ್ಸ್ ಅಥವಾ ಪರ್ಮಿಟ್ ಇಲ್ಲದೆ ಸಾಗಾಣಿಕೆ ಮಾಡುತ್ತಿದ್ದಾಗ ಪತ್ತೆ ಹಚ್ಚಿ ವಾಹನ ಹಾಗೂ ಮದ್ಯದ ಪೆಟ್ಟಿಗೆಗಳನ್ನು ಪಂಚನಾಮೆಯಡಿಯಲ್ಲಿ ಜಪ್ತು ಮಾಡಿಕೊಂಡು ಆರೋಪಿತರನ್ನು ಬಂಧಿಸಿ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 11, 12, 14(2) ಉಲ್ಲಂಘಿಸಿ 32(1)(2), 34 ಹಾಗೂ 38(ಎ)ರ ಪ್ರಕಾರ ಶಿಕ್ಷಾರ್ಹ ಅಪರಾಧ ಎಸಗಿದ್ದರಿಂದ ಗುನ್ನೆ ಸಂಖ್ಯೆ: 30/2005-06, ದಿನಾಂಕ: 18.12.2005 ರಂತೆ ಪ್ರಕರಣ ದಾಖಲಿಸಿ ಪ್ರಥಮ ವರ್ತಮಾನ ವರದಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿದ್ದು, ಅದರ ಪ್ರತಿಯೊಂದಿಗೆ ಮುದ್ದೆಮಾಲನ್ನು ಪ್ರಕರಣದ ತನಿಖೆ ಮುಗಿಯುವವರೆಗೆ ಅಬಕಾರಿ ಉಪ ನಿರೀಕ್ಷಕರು (ಜಾರಿ ಮತ್ತು ತನಿಖೆ) ಖಾನಾಪೂರ ಇವರ ವಶಕ್ಕೆ ನೀಡಲು ಅನುಮತಿ ಪಡೆದಿರುತ್ತಾರೆ.

1) ಟಾಟಾ ಎಲ್‌ಪಿ 1612 ಟ್ರಕ್ ಕೆಂಪು ಬ್ರೇನ್ ಕಲರ್ ಇದ್ದು, ಅದರ ಸಂಖ್ಯೆ: ಎಂಎಚ್-09-ಕ್ಯೂ-6219 ಹಳೆಯ ಚೆಸ್ಸಿ ನಂ.34405-2173883 ಎಂಜಿನ್ ನಂ: 692-ಡಿ-02181884 ನೇದ್ದು ಇರುವುದು (ಮಾಡೆಲ್ 1984) ಅದಕ್ಕೆ ಒಂದು ಸ್ಟೇಪಣಿ ಇರುವುದು)
2) 180 ಮಿಲಿಯ ಮದ್ಯ ತುಂಬಿದ ರಾಯಲ್ ಸ್ಪೇಶಲ್ ಓಲ್ಡ್ ವಿಸ್ಕಿ ಲೇಬಲ್‌ವುಳ್ಳ ತಲಾ 48 ಬಾಟ್ಲಿಗಳು ಇರುವ 29 ಪೆಟ್ಟಿಗೆಗಳು
3) 180 ಮಿಲಿಯ ಮದ್ಯ ತುಂಬಿದ ಶಾಂತ್ರ 3 ಎಕ್ಸ್ ರಮ್ ಲೇಬಲ್‌ವುಳ್ಳ ತಲಾ 48 ಬಾಟ್ಲಿಗಳು ಇರುವ 101 ಪೆಟ್ಟಿಗೆಗಳು.
4) 180 ಮಿಲಿಯ ಮದ್ಯ ತುಂಬಿದ ಡಾಕ್ಟರ್ಸ್ ಬ್ರ್ಯಾಂಡಿ ಲೇಬಲ್‌ವುಳ್ಳ ತಲಾ 48 ಬಾಟ್ಲಿಗಳು ಇರುವ 70 ಪೆಟ್ಟಿಗೆಗಳು.
5) 180 ಮಿಲಿಯ ಮದ್ಯ ತುಂಬಿದ ಗೋಲ್ಡ್ ಏರ್ ಡಿಲಕ್ಸ ಬ್ರ್ಯಾಂಡಿ ಲೇಬಲ್‌ವುಳ್ಳ ತಲಾ 48 ಬಾಟ್ಲಿಗಳು ಇರುವ 42 ಪೆಟ್ಟಿಗೆಗಳು.
6) 180 ಮಿಲಿಯ ಮದ್ಯ ತುಂಬಿದ ಸೋಲ್ಡರ್ಸ್ ಡಾಕ್ಟರ್ ನಂ.1 ಲೇಬಲ್‌ವುಳ್ಳ ತಲಾ 48 ಬಾಟ್ಲಿಗಳು ಇರುವ 19 ಪೆಟ್ಟಿಗೆಗಳು.
7) 180 ಮಿಲಿಯ ಮದ್ಯ ತುಂಬಿದ ಕೋಲಾ 3 ಎಕ್ಸ್ ರಮ್ ಲೇಬಲ್‌ವುಳ್ಳ ತಲಾ 48 ಬಾಟ್ಲಿಗಳು ಇರುವ 9 ಪೆಟ್ಟಿಗೆಗಳು
8) 180 ಮಿಲಿಯ ಮದ್ಯ ತುಂಬಿದ ಪ್ರೋಸಿಡರ್ ಪ್ರಿಮಿಯಂ ವಿಸ್ಕಿ ಲೇಬಲ್‌ವುಳ್ಳ ತಲಾ 48 ಬಾಟ್ಲಿಗಳು ಇರುವ 20 ಪೆಟ್ಟಿಗೆಗಳು
9) ಒಂದು ನೀಲಿ ಬಣ್ಣದ ಪ್ಲಾಸ್ಟಿಕ್ ಹಳೆಯ ತಾಡಪತ್ರಿ, ಒಂದು ಹಗ್ಗ
10) ಒಂದು ಜಾಕ್ ಮತ್ತು ಒಂದು ಕಬ್ಬಿಣದ ಹಾರಿ.

ತನಿಖಾಧಿಕಾರಿಯವರಾದ ಅಬಕಾರಿ ಉಪ ನಿರೀಕ್ಷಕರು (ಜಾರಿ ಮತ್ತು ತನಿಖೆ) ಖಾನಾಪೂರ ತಾಲ್ಲೂಕಾ ಇವರು ಪ್ರಕರಣಕ್ಕೆ ಸಂಬಂಧಪಟ್ಟ ಪ್ರ.ವ.ವ., ಅನುಬಂಧ, ಫಿರ್ಯಾಧಿ, ಸರ್ಚ್ ವಾರೆಂಟ್ ಪಡೆಯಲಾರದಿದ್ದುದಕ್ಕೆ ಕಾರಣಗಳ ಪಟ್ಟಿ ಇವುಗಳ ದೃಢೀಕೃತ ನಕಲುಗಳನ್ನು ಹಾಗೂ ಪಂಚನಾಮಾ, ರಾಸಾಯನಿಕ ತಜ್ಞರ ವರದಿ, ವಾಹನದ ಆರ್.ಸಿ. ಇವುಗಳ ಛಾಯಾ ಪ್ರತಿಗಳನ್ನು ಸಲ್ಲಿಸಿದ್ದು, ಜಪ್ತು ಮಾಡಿದ ವಸ್ತುಗಳನ್ನು ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ರಾಸಾಯನಿಕ ತಜ್ಞರ ವರದಿಯನ್ನು ಗಮನಿಸಲು ಮಾದರಿಗಳಲ್ಲಿ ಅಲ್ಕೋಹಾಲ್ ಇದ್ದು ಅವುಗಳ ಗುಣಮಟ್ಟವು ಬ್ಯೂರೋ ಆಫ್ ಇಂಡಿಯನ್ ಸ್ಟ್ಯಾಂಡರ್ಡ್ ಪ್ರಕಾರ ಇರುವುದಿಲ್ಲವೆಂದು ತಜ್ಞರು ಅಭಿಪ್ರಾಯಪಟ್ಟಿರುವುದು ಕಂಡುಬರುತ್ತದೆ. ಜಪ್ತು ಮಾಡಿದ ವಾಹನವು ಶ್ರೀ ಕೃಶನಾಥ ನಾರಾಯಣ ಪಾಟೀಲ, ಸಾ: ನಂದವಾಡೆ, ತಾ: ಬುದರಗಡ, ಜಿಲ್ಲಾ: ಕೋಲ್ಹಾಪೂರ ಇವರ ಮಾಲೀಕತ್ವಕ್ಕೆ ಸೇರಿದ್ದೆಂದು ಆರ್.ಸಿ. ನೋಡಿದರೆ ಕಂಡುಬರುತ್ತದೆ. ಅಲ್ಲದೆ ವಾಹನವನ್ನು ಬುದರಗಡ, ನಾಗರಿ ಸಹಕಾರಿ ಪತ್ತ ಸಂಸ್ಥಾ ಮರ್ಯಾದಿ, ಗಾರಗೋಟಿ, ತಾ:ಬೂದರಗಡ, ಜಿ: ಕೋಲ್ಹಾಪೂರ ಇವರಿಗೆ ಹೈಪೋತಿಕೇಶನ್ ಆಗಿರುವುದಾಗಿಯೂ ಸಹ ಕಂಡುಬರುತ್ತದೆ.

ದಾಖಲಾತಿಗಳನ್ನು ಗಮನಿಸಲು ಟ್ರಕ್ ನಂ. ಎಂಎಚ್-09-ಕ್ಯೂ-6219 ಇದರಲ್ಲಿ ಕರ ಕೊಡದ 290 ಪೆಟ್ಟಿಗೆ ಮದ್ಯವನ್ನು ಲೈಸನ್ಸ್ ಅಥವಾ ಪರಮಿಟ್ ಇಲ್ಲದೆ ಗೋವಾ ರಾಜ್ಯದಿಂದ ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದುದು ಮೇಲ್ನೋಟಕ್ಕೆ ಸಾಬೀತಾಗಿದ್ದರಿಂದ ಹಾಗೂ ಜಪ್ತು ಮಾಡಿದ ಸ್ವತ್ತುಗಳು ಕಲಂ 43ರ ಪ್ರಕಾರ ಮುಟ್ಟುಗೋಲು ಹಾಕಿಕೊಳ್ಳಬಹುದಾದ ವಸ್ತುಗಳಾಗಿದ್ದರಿಂದ ವಾಹನ ಮಾಲೀಕರಿಗೆ, ಬ್ಯಾಂಕಿಗೆ ಹಾಗೂ ಆರೋಪಿತರಿಗೆ ಸ್ವತ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಾಗಿ ಕಲಂ 43ಬಿ ಅಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ನೀಡಲಾಯಿತು.

ಆರೋಪಿತರು ಹಾಗೂ ವಾಹನ ಮಾಲೀಕರು ಹೊರ ರಾಜ್ಯದವರಾಗಿದ್ದರಿಂದ ನೋಟೀಸನ್ನು ಇಂಗ್ಲೀಷ್‌ನಲ್ಲಿ ಹೊರಡಿಸಲಾಯಿತು. ಕಾರಣ ಕೇಳುವ ನೋಟೀಸುಗಳು ವಾಹನ ಮಾಲೀಕರಿಗೆ ಹಾಗೂ ಬ್ಯಾಂಕಿಗೆ ಜಾರಿಯಾಗಿದ್ದು 2.6.2006 ರಂದು ಸ್ವೀಕೃತಿಗಳು ಬಂದಿರುತ್ತವೆ. ನಿಗದಿತ ಅವಧಿಯಲ್ಲಿ ಇಬ್ಬರಿಂದಲೂ ನೋಟೀಸುಗಳಿಗೆ ಉತ್ತರ ಬಂದಿರುವುದಿಲ್ಲ. ಉಳಿದವರಿಗೆ ಕಳುಹಿಸಿದ ನೋಟೀಸುಗಳು Not known ಎಂಬ ಷರಾದೊಂದಿಗೆ ಜಾರಿಯಾಗದೇ ವಾಪಸ್ಸು ಬಂದಿರುತ್ತದೆ. ಜಪ್ತು ಮಾಡಿ 6 ತಿಂಗಳು ಸಮಯ ಕಳೆದರೂ ಸಹ ಯಾರೂ ಕ್ಲೇಮು ಮಾಡಿರುವುದಿಲ್ಲ.

ಕಲಂ 40 ರಂತೆ ವಾಹನ ಮಾಲೀಕರೇ ತಮ್ಮ ಮುಗ್ಧತೆಯನ್ನು ಮತ್ತು ವಾಹನವನ್ನು ಕರಕೊಡದ ಮದ್ಯದ ಅಕ್ರಮ ಸಾಗಾಣಿಕೆಗೆ ಉಪಯೋಗಿಸುವುದನ್ನು ತಡೆಯಲು ಮುಂಜಾಗ್ರತೆ ತೆಗೆದುಕೊಂಡಿದ್ದರೆಂದು ಈ ಪ್ರಾಧಿಕಾರದ ಮುಂದೆ ಸಾಬೀತುಪಡಿಸಬೇಕಾಗುತ್ತದೆ. ವಾಹನ ಮಾಲೀಕರು ಜಪ್ತು ಮಾಡಿದ ವಸ್ತುಗಳನ್ನು ಕ್ಲೇಮು ಮಾಡದೇ ಇರುವುದನ್ನು ಹಾಗೂ ಕಾರಣ ಕೇಳುವ ನೋಟೀಸಿಗೆ ಉತ್ತರವನ್ನೂ ಸಹ ನೀಡದೇ ಇರುವುದನ್ನು ಗಮನಿಸಲು ವಾಹನ ಮಾಲೀಕರು ಶಾಮೀಲಾಗಿಯೇ ಲೈಸನ್ಸ್ ಅಥವಾ ಪರಮಿಟ್ ಇಲ್ಲದೆ ವಾಹನದ ಮೇಲೆ ಕರ ಕೊಡದ ಮದ್ಯದ ಅಕ್ರಮ ಸಾಗಾಣಿಕೆ ನಡೆಸಿರುತ್ತಾರೆಂದು ನಂಬಬೇಕಾಗುತ್ತದೆ. ಶ್ಯಾಂಪಲ್‌ಗಳಲ್ಲಿ ಅಲ್ಕೋಹಾಲ ಅಂಶವು 33.5 ಯು.ಪಿ. ಯಿಂದ 69.3 ಯು.ಪಿ. ವರೆಗೆ ಇದ್ದುದುದರಿಂದ ಈ ತೀಕ್ಷ್ಣತೆಯ ನಿಯಮಗಳಲ್ಲಿ ನಿಗದಿಪಡಿಸಿದ್ದಕ್ಕಿಂತ ವ್ಯತಿರಿಕ್ತವಾಗಿರುತ್ತದೆ. ಅಲ್ಲದೆ ಗುಣಮಟ್ಟವು ಬ್ಯೂರೋ ಆಫ್ ಇಂಡಿಯನ್ ಸ್ಟ್ಯಾಂಡರ್ಡ್ ಪ್ರಕಾರ ಇರುವುದಿಲ್ಲ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಇಎಕ್ಸ್‌ಇ/ಬಿಜಿಎಂ/ಸಿಓಎನ್/168/2005-06, ದಿನಾಂಕ: 29ನೇ ಜೂನ್ 2006**

ಜಿ.ಎಂ. ವಾಲಿ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ವಿಚಕ್ಷಣ ದಳ, ಬೆಳಗಾಂವ ಆದ ನಾನು ಅಬಕಾರಿ ಕಾಯ್ದೆ 1965ರ ಕಲಂ 43ಬಿ ಅಡಿಯಲ್ಲಿ ವಿಧಿಸಿದ ಕ್ರಮವನ್ನು ಅನುಸರಿಸಿದ ನಂತರ ಕೆಳಗೆ ನಮೂದಿಸಿದ ಜಪ್ತು ಮಾಡಿದ ಸ್ವತ್ತುಗಳನ್ನು (ಶ್ಯಾಂಪಲ್ ಹೊರತುಪಡಿಸಿ) ಕಲಂ 43ಎ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಮುಟ್ಟುಗೋಲು ಹಾಕಿಕೊಂಡಿದ್ದೇನೆ:

1) ಟಾಟಾ ಎಲ್‌ಪಿ 1612 ಟ್ರಕ್ ಎಂಎಚ್-09-ಕ್ಯೂ-6219 ಚೆಸ್ಸಿ ನಂ.34405-2173883 ಎಂಜಿನ್ ನಂ: 692-ಡಿ-02181884 ನೇದ್ದು (ಮಾಡೆಲ್ 1984) ಅದಕ್ಕೆ ಒಂದು ಸ್ಟೇಪಣಿ ಇರುವುದು)
2) 180 ಮಿಲಿಯ ಮದ್ಯ ತುಂಬಿದ ರಾಯಲ್ ಸ್ಪೇಶಲ್ ಓಲ್ಡ್ ವಿಸ್ಕಿ ಲೇಬಲ್‌ವುಳ್ಳ ತಲಾ 48 ಬಾಟ್ಲಿಗಳು ಇರುವ 29 ಪೆಟ್ಟಿಗೆಗಳು
3) 180 ಮಿಲಿಯ ಮದ್ಯ ತುಂಬಿದ ಶಾಂತ್ರ 3 ಎಕ್ಸ್ ರಮ್ ಲೇಬಲ್‌ವುಳ್ಳ ತಲಾ 48 ಬಾಟ್ಲಿಗಳು ಇರುವ 101 ಪೆಟ್ಟಿಗೆಗಳು.
4) 180 ಮಿಲಿಯ ಮದ್ಯ ತುಂಬಿದ ಡಾಕ್ಟರ್ ಬ್ರ್ಯಾಂಡಿ ಲೇಬಲ್‌ವುಳ್ಳ ತಲಾ 48 ಬಾಟ್ಲಿಗಳು ಇರುವ 70 ಪೆಟ್ಟಿಗೆಗಳು.
5) 180 ಮಿಲಿಯ ಮದ್ಯ ತುಂಬಿದ ಗೋಲ್ಡ್ ಏರ್ ಡಿಲಕ್ಸ ಬ್ರ್ಯಾಂಡಿ ಲೇಬಲ್‌ವುಳ್ಳ ತಲಾ 48 ಬಾಟ್ಲಿಗಳು ಇರುವ 42 ಪೆಟ್ಟಿಗೆಗಳು.
6) 180 ಮಿಲಿಯ ಮದ್ಯ ತುಂಬಿದ ಸೋಲ್ಡರ್ಸ್ ಡಾಕ್ಟರ್ ನಂ.1 ಲೇಬಲ್‌ವುಳ್ಳ ತಲಾ 48 ಬಾಟ್ಲಿಗಳು ಇರುವ 19 ಪೆಟ್ಟಿಗೆಗಳು.
7) 180 ಮಿಲಿಯ ಮದ್ಯ ತುಂಬಿದ ಕೋಲಾ 3 ಎಕ್ಸ್ ರಮ್ ಲೇಬಲ್‌ವುಳ್ಳ ತಲಾ 48 ಬಾಟ್ಲಿಗಳು ಇರುವ 9 ಪೆಟ್ಟಿಗೆಗಳು
8) 180 ಮಿಲಿಯ ಮದ್ಯ ತುಂಬಿದ ಪ್ರೋಸಿಡರ್ ಪ್ರಿಮಿಯಂ ವಿಸ್ಕಿ ಲೇಬಲ್‌ವುಳ್ಳ ತಲಾ 48 ಬಾಟ್ಲಿಗಳು ಇರುವ 20 ಪೆಟ್ಟಿಗೆಗಳು
9) ಒಂದು ನೀಲಿ ಬಣ್ಣದ ಪ್ಲಾಸ್ಟಿಕ್ ಹಳೆಯ ತಾಡಪತ್ರಿ, ಒಂದು ಹಗ್ಗ
10) ಒಂದು ಜಾಕ್ ಮತ್ತು ಒಂದು ಕಬ್ಬಿಣದ ಹಾರಿ.

ಅಬಕಾರಿ ಆಯುಕ್ತರು ಪತ್ರ ಸಂಖ್ಯೆ: ಇಸಿಸಿ/73/ಸಿಆರ್‌ಎಂ/04, ದಿನಾಂಕ: 12.9.2005 ರಲ್ಲಿ ಮುಟ್ಟುಗೋಲು ಹಾಕಿಕೊಂಡ ಭಾರತೀಯ ತಯಾರಿಕೆ ಮದ್ಯಗಳನ್ನು ನಾಶಪಡಿಸಲು ನೀಡಿದ ಸೂಚನೆಯ ಮೇರೆಗೆ ಸದರಿ ಆದೇಶದಲ್ಲಿ ತಿಳಿಸಿದ ಕ್ರಮವನ್ನು ಅನುಸರಿಸಿ ಅಬಕಾರಿ ಉಪ ಅಧೀಕ್ಷಕರು (ಜಾರಿ ಮತ್ತು ತನಿಖೆ) ಬೆಳಗಾಂವ ಉಪ ವಿಭಾಗ ಇವರ ಸಮಕ್ಷಮ ನಾಶಪಡಿಸಲು ಹಾಗೂ ಖಾಲಿ ಬಾಟ್ಲಿಗಳನ್ನು ಹರಾಜು ಮಾಡಲು ಆದೇಶಿಸಿದೆ.

ಈ ಆದೇಶವನ್ನು ಇಂದು ದಿನಾಂಕ: 29.6.2006 ರಂದು ಉಕ್ತಲೇಖನ ಕೊಟ್ಟು, ಕಂಪ್ಯೂಟರ್‌ನಲ್ಲಿ ಬೆರಳಚ್ಚು ಮಾಡಿಸಿ, ಪ್ರತಿಯನ್ನು ತಿದ್ದಿ ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿನಲ್ಲಿ ಬರುವುದು.

**ಜಿ.ಎಂ. ವಾಲಿ**

ಪಿ.ಆರ್. 1067

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ವಿಚಕ್ಷಣ ದಳ,
ಬೆಳಗಾಂವ ಜಿಲ್ಲೆ, ಬೆಳಗಾಂವ.

## ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ ಭದ್ರಾವತಿ ವಿಭಾಗ, ಭದ್ರಾವತಿ

**ಅಧಿಸೂಚನೆ ಸಂಖ್ಯೆ: ಎ3-ಎಫ್‌ಒಸಿ-ಸಿಆರ್-3/2006-07, ದಿನಾಂಕ: 6ನೇ ಜುಲೈ 2006**

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದ ಕೆಳಕಂಡ ವಾಹನಗಳನ್ನು ವಲಯದ ಸಿಬ್ಬಂದಿಯವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71 (ಎ)ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ.

| ಕ್ರ.ಸಂ. | ವಾಹನಗಳ ವಿವರ | ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | ಟಿವಿಎಸ್ ಸುಜುಕಿ ಮ್ಯಾಕ್ಸ್ 100 ಆರ್ ಬೈಕ್ ನಂ.ಕೆಎ-15-ಹೆಚ್-3280 | 48/06-07, ದಿನಾಂಕ: 25.5.06 | 1909 ಎಂ 472774 | 190974238 |
| 2 | ಮಾರುತಿ ಓಮ್ನಿ ವ್ಯಾನ್ ನಂ.ಕೆಎ 16 ಎಂ 108 | 47/06-07, ದಿನಾಂಕ: 9.6.06 | 567236 | 856827 |
| 3 | ಮಾರುತಿ ಓಮ್ನಿ ವ್ಯಾನ್ ನಂ.ಕೆಎ 18 ಎಂ 5136 | 110/05-06, ದಿನಾಂಕ: 28.3.06 | ಎಫ್‌8ಐಎನ್‌20 ಹೆಚ್ 1727 | ಎಸ್‌ಟಿ91ಐಎನ್ 409939 |

